# ಕೊರವಂಜಿ

*Koravanji*

ಮಾರ್ಚ್

೧೯೫೮



ಸಂಪಾದಕರು :

ಶ್ರೀ॥ ರಾ. ಶಿ.

ಬರಹಗಾರರು :

ಶ್ರೀಮತಿ ಬಿ. ಪದ್ಮಾವತಿ

ಶ್ರೀ॥ ಪಾಟೊಳಿ

ಶ್ರೀ॥ ಬಿ. ಎಸ್. ರುದ್ರಪ್ಪ

ಶ್ರೀ॥ ಚಿಕ್ಕಪಾಪಯ್ಯ.

ಶ್ರೀ॥ ಪ್ರಸಾದ್

ಶ್ರೀ॥ ರಾಮಿ

ಶ್ರೀಮತಿ ಸುನಂದಮ್ಮ

ಶ್ರೀ॥ ಪಾರ್ಥಸಾರಥಿ

ಶ್ರೀ॥ ಅ. ರಾ. ಸೇ.

ಶ್ರೀ॥ ಎಸ್. ರುವ್ರಪ್ಪ

ಇತ್ಯಾದಿ, ಇತ್ಯಾದಿ.

ಬಿಡಿ ಪ್ರತಿ ಕೇವಲ ನಾಲ್ಕಾಣೆ

ತಿಳಿನಗೆಯ ಮಾಸಪತ್ರಿಕೆ




# ವೈಟೋಫೆರಿನ್

## (ಆಧುನಿಕ ಶಕ್ತಿವರ್ಧಕ ಟಾನಿಕ್)

ಇದರಲ್ಲಿ "ಎ" "ಬಿ" ಮತ್ತು "ಡಿ" ಎಂಬ ವೈಟಮಿನ್ನುಗಳೂ, ಐರನ್, ಕ್ಯಾಲ್ಸಿಯಂ ಮುಂತಾದ ಲೋಹ ವಿಶೇಷಗಳೂ, ಶುದ್ಧಗೊಳಿಸಿದ ತಾಮ್ರವೂ, ಮತ್ತು ಮಾಲ್ಟ್ ಸಾರ, ಜೇನುತುಪ್ಪಗಳನ್ನು ಸೇರಿಸಿ ತಯಾರಿಸಿದ ಒಂದು ಅಮೃತಪಾನ. ಇದರಲ್ಲಿ ದೇಹಶಕ್ತಿಗೆ ಬೇಕಾದ ಸಕಲ ಔಷಧಗಳ ಸಮೂಹವೂ ಇದೆ. ಖಾಯಿಲೆಯಿಂದ ಎದ್ದವರಿಗೂ, ಬಸುರಿ ಬಾಣಂತಿಯರ ದೇಹದಾರ್ಢ್ಯಕ್ಕೂ ಇದು ಅತ್ಯುತ್ತಮವಾದ ಔಷಧ. ಸೇವಿಸಲು ಬಹಳ ರುಚಿಯಾಗಿಯೂ ಮತ್ತು ಮಧುರವಾಗಿಯೂ ಇದೆ.



**ತಯಾರಕರು:**

**ದಿ ಮೈಸೂರು ಇಂಡಸ್ಟ್ರಿಯಲ್ ಅಂಡ್ ಟೆಸ್ಟಿಂಗ್ ಲ್ಯಾಬೋರಟರಿ ಲಿಮಿಟೆಡ್,**

**ಮಲ್ಲೇಶ್ವರಂ - - - ಬೆಂಗಳೂರು 3.**

## 28–2–58 ರಿಂದ ನಡೆಯುತ್ತಿದೆ.

ಬೆಂಗಳೂರು: **ಸ್ಟೇಟ್ಸ್ ಮತ್ತು ಶ್ರೀ** ಮಂಗಳೂರು: **ಪ್ರಭಾತ್**

**ಚಿತ್ರಮಂದಿರಗಳಲ್ಲಿ ಪ್ರತಿದಿನ 3 ಪ್ರದರ್ಶನಗಳು**

ಜನಕಲಾ ಪಿಕ್ಚರ್ಸ್‌ರವರ—

# ಮಣಿಮಾಲೈ (ತಮಿಳು)



**ಜೆಮಿನಿಗಣೇಶನ್ ಸಾವಿತ್ರಿ – ಶ್ರೀರಾಮ್ – ನಾಗಯ್ಯ – ಚಂದ್ರಬಾಬು**

**ತಂಗವೇಲು ಮುಂತಾದವರು**

ಮುಂದಿನ ಬದಲಾವಣೆ:

**ಮೈಸೂರು: ಪ್ರಭುದೇವ**

VIKRAM RELEASE




ಸಂಪುಟ ೩-೧೬ ಮಾರ್ಚಿ ೧೯೫೮ ಸಂಚಿಕೆ ೧೨

## ಕುಹಕಿಡ್ಡಿಗಳು

ತಪ್ಪು ಲೆಕ್ಕ ಕೊಟ್ಟ ಶಾನುಭೋಗ, ಪಟೇಲನನ್ನು ದೂರಿದನಂತೆ—

—ಇದು ಟಿ. ಟಿ ಕೆ. ಯವರ ಗಾದೆಯಲ್ಲ.

* * *

ಅತಿ ಆಶೆ, ಕಂಡವರ, ಗತಿ ಕೆಡಸಿತು ಎಂದು ಮುಂಧ್ರಾರವರು ಅನ್ನಲಿಲ್ಲವಂತೆ!

* *

ಹತ್ತಿರ ಇದ್ದವರು ಹೇಗಾದರೂ ಮುದ್ದು,
ಕೂಡ ಇದ್ದವರಿಗೆ ಟಿ. ಟಿ. ಕೆ.ಮುದ್ದು.
—ಎಂದು ನೆಹ್ರೂ ಅವರು ಅನ್ನಲಿಲ್ಲವಂತೆ

* * *

ವೈದ್ಯೋ ನಾರಾಯಣೋ ಹರಿಃ ಎಂದು ಔಷಧಿ ಕುಡಿಯುತ್ತಾರೆ; ಸಾಂಪ್ರದಾಯಸ್ಥರು.

ಕೊಟ್ಟ ಔಷಧಿ ಕೆಮಾಕ್ಕನದೆ ಕುಡಿದೂ ಕುಡಿದೂ ವೈದ್ಯನಾಥ ಸಂಕಟಪಡೋದು ಸಾಂಪ್ರದಾಯಿಕ

* * *

ನರಭಕ್ಷಕ! ಹುಷಾರ್! ಎಂಬ ಕೂಗು; ಟಿ. ಟಿ. ಕೆ. ನಂತರ ಕೇಳಿಸುತ್ತಲೇ ಇಲ್ಲ ಎನ್ನುವುದು ವ್ಯಂಗ್ಯಾರ್ಥ ತೋರಬಹುದೇನೋ!

ಭಾರತದ ಕೇಂದ್ರ ಆರ್ಥಿಕ ಸಚಿವರುಗಳು, ಪಾಕೀಸ್ಥಾನದ ಪ್ರಧಾನ ಸಚಿವರ ಮಾರ್ಗದಲ್ಲಿ ತಾತ್ಕಾಲಿಕವಾಗಿ ಮುಂದುವರೆಯುತ್ತಿರುವುದು ಮೂಲಭೂತ ವ್ಯೆತ್ಯತ್ವ ವನ್ನು ಸೂಚಿಸುತ್ತದೆ (ಹೇಳಿಕೆ)

—ಹಣದ ವಿಷಯದಲ್ಲಿ ಭೂಲೋಕವೆಲ್ಲಾ ಒಂದೇ!!

*　　　　*　　　　*

ಸಂಜೆ ಆದರೆ ಮಗು ಸುಮ್ಮನೆ ಅಳುಕ್ಕೆ ಶುರುಮಾಡುತ್ತಿ ಡಾಕ್ಟ್ರೆ! ಎಂದು ಲಕ್ಷಣವಾಗಿದ್ದ, ಆರೋಗ್ಯದಿಂದಿದ್ದ ಮಗುವನ್ನು ಡಾಕ್ಟರು ಪರೀಕ್ಷಿಸಿ ನಂತರ ಹೇಳಿದರಂತೆ—

"ಅಮ್ಮಾ! ನಿಮ್ಮ ಮನೆ ರೇಡಿಯೋ ಮಾರಿಬಿಡಿ!" ಎಂದು

—ಹಾಗೆ ಮಾಡಿದ ನಂತರ ಮಗು ಅಳಲಿಲ್ಲವಂತೆ—

*　　　　*　　　　*

ಬಜೆಟ್ ಅಧಿವೇಶನದ ಆರಂಭದಲ್ಲೇ ಸಂಯುಕ್ತ ಮಹಾರಾಷ್ಟ್ರದ ಬೆಂಬಲಿಗ ಸದಸ್ಯರು ವಾಕ್-ಔಟ್ ಮಾಡಿದರಂತೆ!

—ಆದರೆ ಸಂತೋಷ ಪಡಬೇಡಿ ಅವಸರದಲ್ಲಿ; ತಿರುಗಿ ಬಂದು ಕೂತು ಬಿಟ್ಟರಂತೆ!

*　　　　*　　　　*

ಜ॥ ಚಗ್ಲಾ ಅವರಿಗೆ ಎಡಗೈ ಬಲಗೈಗಳಿಂದ ಅಭಿವಂದನೆಗಳ ಸುರಿಮಳೆ(ಪತ್ರಿಕೆ)

—ನಮಗೂ ಅನ್ನಿಸಿತು ಕೆಲವು ಅಭಿವಂದನಾ ಟೀಕೆಗಳನ್ನು ಓದಿದಾಗ ಎಡಗೈದೆ ಹೆಚ್ಚಾಗಿತ್ತೆಂದು.

*　　　　*　　　　*

ನವ್ಯಮಂತ್ರ ಹೇಳುವ ಪುರೋಹಿತರಿಗೆ-ನಯಾಪೈಸಾ ದಕ್ಷಿಣೆ!!

*　　　　*　　　　*

ಮುದುಕರೆಲ್ಲರೂ ದೊಡ್ಡ ಗಂಟಲಿನಿಂದ ಭಾಷೆಗೊಂದಲ ಹಾಕುತ್ತಿರುವುದನ್ನು ಕಂಡು ಕೇಂದ್ರ ಸರ್ಕಾರದವರು ಆರೋಗ್ಯ ಯೋಜನೆಗಳನ್ನು ಸ್ವಲ್ಪ ತಡಮಾಡಿ ಇನ್ನು ಮೇಲೆ ಮುದುಕರು ಇಷ್ಟು ಆರೋಗ್ಯವಾಗಿ ಧೃಡಕಾಯರಾಗಿ ಇರಲಾರದಂತೆ ಯೋಜನೆ ಹೂಡುತ್ತಾರೆಂಬುದು ಶುದ್ಧ ಸುಳ್ಳಂತೆ!!

*　　　　*　　　　*

ಜವಳಿ ಅಂಗಡಿಯಲ್ಲಿ ಕಂಡಿದ್ದು—

ತುಂಬು ಹೆಂಗಸರು ರವಿಕೇಗೆ ಕಾಲುಗಜ ಬಟ್ಟೆ ಕೊಂಡರೆ, ಚಳತೊಂಬು ಧರಿಸಿದ ಚಪ್ಪಟೆ ಹೆಂಗಸರು ಒಂದು ಗಜ ಕೊಳ್ಳುತ್ತಾರೆ!!

---

# ಉರಿಗಾಳು

ಸದಸ್ಯರ ಭಾಷಣಗಳನ್ನು ಭಾಷಾಂತರಿಸಿ ಕೇಳಿಸುವ ವ್ಯವಸ್ಥೆಯನ್ನು ವಿಧಾನ ಸಭೆಯಲ್ಲೂ ಪರಿಷತಿನಲ್ಲೂ ಮಾಡಲಾಗಿಯಂತೆ........ಮೈಸೂರು ಕನ್ನಡವನ್ನು ಧಾರ್ವಾಡ ಭಾಷೆಗೂ, ಧಾರ್ವಾಡ ಭಾಷೆಯನ್ನು ಮೈಸೂರಿನ ಹೆಣ್ಣು ಕನ್ನಡಕ್ಕೂ ಅಂತರಿಸಲಾಗುವುದು, ತಾನೆ ?

* * *

ಕೇಂದ್ರ ಹಣಕಾಸಿನ ಸಚಿವ ಸ್ಥಾನಕ್ಕೆ, ಕಿವುಡು ಮೂಗರೊಬ್ಬರನ್ನು ಆರಿಸಿದರೆ ಅವರು ತಮ್ಮ ಎಲ್ಲ ಭಾವನೆಗಳನ್ನೂ ಸಲಹೆಗಳನ್ನೂ ಲಿಖಿತ ಮೂಲಕವೇ ಕೊಡ ಬೇಕಾಗುತ್ತದೆಂದೂ, ಟಿ. ಟಿ. ಕೆ — ಹೆಚ್. ಎಂ. ಪಿ. ಘಟನೆಗಳು ಕಡಮೆಯಾಗು ವುವು ಎಂದೂ ಹಲವರು ಪ್ರಮುಖರು ಅಭಿಪ್ರಾಯಪಟ್ಟಿದ್ದಾರೆ.

* * *

ತಮ್ಮ ತಮ್ಮ ಒಳಜಗಳಗಳಿಂದ ಕಾದಾಟ ಕಚ್ಚಾಟಗಳಿಂದ ಮೌಲಾನಾ ಅಬುಲ್‌ಕಲಾಂ ಅಜಾದರೇ ಮುಂತಾದ ದೇಶನಾಯಕರಿಗೆ ತುಂಬ ಮನೋವೇದನೆ ಯನ್ನಿತ್ತ ಮಹನೀಯರು ಈಗ ಅವರ ನಿಧನಕ್ಕಾಗಿ ಕಣ್ಣೀರು ಬಿಡುತ್ತಿರುವರು.... ಇನ್ನು ಮುಂದೆ ಅವರು ಅದೇ ಮನೋವೇದನೆಯನ್ನು ಇನ್ನು ಯಾರಿಗೆ... ....?

*

ಪ್ರಶ್ನೆ ಪತ್ರಿಕೆಗಳನ್ನು ಬಹು ಜೋಪಾನವಾಗಿಟ್ಟಿರಲು ಆಂಧ್ರ ಸರ್ಕಾರ ವಿಶೇಷ ಕಾರ್ಯಕ್ರಮ ತೆಗೆದುಕೊಂಡಿದೆಯಂತೆ, ಸಂಜೀವರೆಡ್ಡಿಯವರು ತಿಳಿಸಿದರು. ಅದರಿಂದೇನು ? ಈಚಿನ ಹುಡುಗರು ಪ್ರಶ್ನೆಪತ್ರಿಕೆಗಳನ್ನು ಪತ್ತೆಹಚ್ಚಲು ಪ್ರಯತ್ನಿಸು ವುದಿಲ್ಲ. ತಮ್ಮ ಉತ್ತರ ಪತ್ರಿಕೆಗಳು ಯಾವ ಪರೀಕ್ಷಕನ ಹತ್ತಿರ ಹೋಗಿವೆ, ಎಂದು ಪತ್ತೆಹಚ್ಚುತ್ತಾರೆ, ಸಾಕು.

* * *

ಸೂರ್ಯಾಸ್ತಮನಕ್ಕೆ ಮೊದಲೇ ಊಟ ಇತ್ಯಾದಿಗಳನ್ನು ಮುಗಿಸಿ ಅನಂತರ ಬಾಯಿ ತೆರೆಯದೆ ಮೌನವಾಗಿರುವ ವ್ರತವನ್ನಾಚರಿಸುವವರಿಗೆ, ಬೆಂಗಳೂರಿನ ಅನೇಕ ಬಡಾವಣೆಗಳು ಉತ್ತಮ ನಿವಾಸಸ್ಥಾನಗಳು (ಜಾಹಿರಾತು) ಏಕೆಂದರೆ, ಅಲ್ಲಿರುವ ಕೋಟಿಗಟ್ಟಲೆ ಸೊಳ್ಳೆಗಳಿಗೆ ಹೆದರಿ, ಜನ ಬಾಯಿ ಮುಚ್ಚಿಯೇ ಕೂಡ ಬೇಕಾಗಿದೆ.

* * *

ನವಿಲುಗಳನ್ನು ನಮ್ಮ ದೇಶದಿಂದ ಹೊರದೇಶಗಳಿಗೆ ರಫ್ತು ಮಾಡಕೂಡ ದೆಂದು ಸಮಿತಿ ಶಿಫಾರಸು ಮಾಡಿದೆ (ವರದಿ) ಕವಿ ಸಮ್ಮೇಳನದ ಕಾರ್ಯಕಾರಿ ಸಮಿತಿಯದೇ ಇರಬೇಕು, ಅಲ್ಲವೆ, ಈ ಠರಾವು?

* *

ವಿದೇಶಿ ಗಣ್ಯ ಅತಿಥಿಗಳು ಬೆಂಗಳೂರಿಗೆ ಬಂದಾಗ, ಅವರಿಗಾಗಿ ಮೈಸೂರಿ ನವರು ಏರ್ಪಡಿಸುವ "ವಿವಿಧ ಸಂಗೀತ ನಾಟ್ಯಕಲಾ" ಕಾರ್ಯಕ್ರಮದಲ್ಲಿ, ತೆಲುಗು ಹಾಡುಗಳನ್ನೂ ತಮಿಳು ನೃತ್ಯಗಳನ್ನೂ ಸೇರಿಸುವುದರಿಂದ, ಅತಿಥಿಗಳು ಮದ್ರಾಸಿಗೂ ಹೈದ್ರಾಬಾದಿಗೂ ಹೋಗದೆ ನೆಟ್ಟಗೆ ಕಲ್ಕತ್ತಾಗೋ ಡಿಲ್ಲಿಗೋ ಹೊರಟುಬಿಡು ತ್ತಿದ್ದಾರೆ ಎಂಬ ದೂರು ಹೋಗಿದೆಯಂತೆ.

* * *

"ಮೀನು ತಿಂದರೆ ಮೆದುಳು ಚುರುಕಾಗುತ್ತದೆ; ಅದ್ದರಿಂದ ಮೀನನ್ನು ಸಾಕಿ" ಎಂದು ಮಂತ್ರಿಗಳೊಬ್ಬರು ಘೋಷಿಸಿದರೆ...."ಮೀನನ್ನು ತಿನ್ನುವವನಿಗೆ ಮೀನಿಗಿಂತ ಬುದ್ಧಿ ಚುರುಕು" ಎಂಬಷ್ಟನ್ನು ಮಾತ್ರ ನಾವು ಈಗಲೇ ಒಪ್ಪಿಕೊಳ್ಳುತ್ತೇವೆ.

* * *

ಹುಲಿ ಚರ್ಮ ಹಾಸಿ ಕುಳಿತಿದ್ದ ಒಂದು ಸತ್ವವನ್ನು ಕಂಡು ನಾನು ಹೆದರಿ ಓಡಿದೆ (ವರದಿ)........ಓ! ಹುಲಿಯೇ ಇರಬೇಕು, ಹಾಗೆ ಕುಳಿತಿದ್ದುದು.

* * *

ಆರು ಬದುಕಿದರಯ್ಯಾ ಹರಿದಾಸ ಮುಂದ್ರನ ನಂಬಿ?—ಎಂಬ ಉದ್ಗಾರ ಕೇಳಿಬಂತಂತೆ, ಮೊನ್ನೆ ವಿಮಾನ ನಿಲ್ದಾಣದಲ್ಲಿ.

* * *

ಟಿ. ಟಿ. ಕೆ. ಚೌತಿ ಮುಂದ್ರನನ್ನು ನೋಡಿಯೇ ಇರಬೇಕು, ಎಂದು ಮೈಲಾ ಪುರದ ಜ್ಯೋತಿಷ್ಯ ನುಡಿದಿದಾನಂತೆ.

* * *

ಕನ್ನಡದಲ್ಲೇನಿದೆ ಎಂಬ ಪ್ರಶ್ನೆಗೆ, ಪ್ರಶ್ನೆಗಳಿವೆ, ಉತ್ತರವಿಲ್ಲ ಎಂದು ಬರೆಯು ಲಾಯಿತಂತೆ.

* * *

ನವ್ಯಕಾವ್ಯವೊಂದನ್ನು ಅಚ್ಚುಮಾಡಿದಾಗ, ಅಚ್ಚುಕೂಟದ ಮೊಳೆ ಜೋಡಿ ಸುವ ನೌಕರನೊಬ್ಬನಿಗೆ ಹುಚ್ಚು ಹಿಡಿದಿತ್ತಲ್ಲವೆ? ಈಗ, ಆತ ಗುಣಮುಖವಾಗು ತ್ತಿದಾನೆ, ಎಂದು ತಿಳಿದುಬಂದಿದೆ. ಆತನನ್ನು ಡಿಸ್ಚಾರ್ಜ್ ಮಾಡಿದ ಕೂಡಲೇ, ಅದೇ ಕೋಣೆಯಲ್ಲಿ ಆ ನವ್ಯ ಕವಿಯನ್ನಿರಿಸಲಾಗುವುದಂತೆ.

---

# ಕೊರವಾನುಭವ

## "ತಿಳಿ! ನಗೆ! ಯ ಮಾಲೆ-೧"

ಒಂದು ಉದ್ದಿನ ವಡೆ, ಒಂದು ಅರಕಂಚಟ್ಟೆಯಷ್ಟು ಸಾಂಬಾರ್, ಎರಡನ್ನೂ ಬೇರರ್, ಕ್ಲಬ್ಬಿನ ವರಾಂಡಕ್ಕೆ, ಬೈಠಕ್ ಖಾನೆಯಲ್ಲಿ ಹಳೇ ಪತ್ರಿಕೆ ಓದುತ್ತಿದ್ದ, ನನ್ನ ಎದುರಿಗೇ ತೆಗೆದುಕೊಂಡು ಹೋದ. ಓಹೋ! ಸ್ವಾಮಿ ಬಂದಿದ್ದಾನೆ ಅಂತ ತಿಳಿಯಿತು. ತಂಗಳ ಪತ್ರಿಕೇನ ತೆಗೆದೆಸೆದು, ವರಾಂಡಕ್ಕೆ ಹೋದೆ. ಹೊರಗೆ ಹುಲ್ಲಾವಲಿನ ಮೇಲೆ ಸ್ವಾಮಿ ಯಥಾಪ್ರಕಾರ, ಚಪ್ಪಲೀನ ನೆಲದ ಮೇಲೆ ಬಿಟ್ಟು ಕುರ್ಚಿಯ ಮೇಲೆ ಚಕ್ಕಳಮುಟ್ಟಿಗೆ ಹಾಕಿ ಕೂತಿದ್ದಾನೆ. ಪಕ್ಕದಲ್ಲೊಬ್ಬ ಆಗಂತುಕ ಕೂತಿದ್ದಾನೆ. ಸೈಂಧವನ ಆಕಾರವಾದರೂ ಎಳೆಯ ಮೊಗ, ತುಂಬಿದ ಕರಿಯ ಕೂದಲು. ಕಿರಿನಗೆ ತುಟಿಗಳ ಅಂಚಿನಲ್ಲಿ ಸುಳಿದಾಡುತ್ತಲೇ ಇತ್ತು. ಚಿರಂಜೀವಿ ಬಲು ಚೆನ್ನು ನೋಡುಕ್ಕೆ.

"ಏನು ಸ್ವಾಮಿ! ಚೆನ್ನಾಗಿದ್ದೀಯಾ! ಈಗೀಗ ಇಲ್ಲಿ ನೀನು ಅಪರೂಪ. ಕ್ಲಬ್ಬಿನಲ್ಲಿ ಇವತ್ತು ಈರುಳ್ಳಿ ಸಾಂಬಾರ್ ಮಾಡಿದ್ದಾರೆ ಅಂತ ಹೇಗೆ ನಿನಗೆ ತಿಳಿಯಿತು? ನಿಮ್ಮನೆ ತನಕ ಇದರ ಘಮಘಮ ಹೊಡೆದಿತ್ತೇ? ಅಥವಾ ನಿನ್ನ ಮೂಸುವ ಶಕ್ತಿ, ನಿನ್ನ ವಂಶಾನುವಂಶ ಪೂರ್ವೀಕರಾದ ದತ್ತಾತ್ರೇಯ ಅನುಯಾಯಿಗಳಾದ, ನಾಯಿಗಳಂತೆ, ಅತಿ ತೀಕ್ಷ್ಣವಾಗಿ ಮಾರ್ಪಡಿಸಿದೆಯೋ?—ಅಂದ ಹಾಗೇ ಹೊಸ ಅತಿಥಿಗಳೆದರು ನಿನ್ನನ್ನು, ಯಥಾಪ್ರಕಾರ, ಮಾತನಾಡಿಸುತಿದ್ದೀನಿ. ಇವರು ಚೆನ್ನಾಗಿ ಗೊತ್ತು ತಾನೆ ನಿನಗೆ?

ಎಂದು ಆಗಂತುಕನ ಕಡೆ ತಿರುಗಿ "ಕ್ಷಮಿಸಿ! ಮಾರಾಯ್ರ್ರಾ, ಆಕಾಶದಲ್ಲಿ ಅಮೇರಿಕಾ ಯಾಂಗ್ಕ್ವೀಕ್ ತೋರುವಂತೆ, ನಮ್ಮ ಸಾಮಿ ಈಚೀಚಿಗೆ ಕ್ಲಬ್ಬಿನಲ್ಲಿ ಕಾಣಿಸಿಕೊಳ್ಳುತ್ತಾನೆ. ಅವನ್ನ ಕಂಡ ಅತೀವ್ರ ಕುಷಿಯಲ್ಲಿ ನನ್ನ ನಾಲಿಗೆ ಚಪಲ ತೀರಿಸಿಕೊಳ್ಳಲು ಹೀಗೆ ಮಾತಾಡೋದು ನಮ್ಮಲ್ಲಿ ಸಾಮಾನ್ಯ—ನೀವೇನೂ ತಿಳಿದು ಕೊಳ್ಳಬೇಡಿ" ಎಂದು ಹುಸಿ ಕ್ಷಮಾಪಣೆ ಬೇಡಿದೆ. ನೀನೇನಾದರೂ ತಿಳಿದುಕೋ ನನಗೇನು ಲುಕ್ಸಾನು ಎನ್ನುವ ಧಾಟಿ ಮನಸ್ಸಿನ ಹಿಂದೆ ಅನ್ನಿಸುತ್ತಲೇ ಇತ್ತು.

ಆತನ ಕಿರಿಮುಖದಲ್ಲಿ ಕೂಡ 'ನೀವೇನಾದರೂ ಚಲ್ಲು ಮಾತನಾಡಿ ನನಗೇನು ಲುಕ್ಸಾನು' ಎನ್ನುವ ಭಾವನೆ ಕಾಣಿಸ್ಸಿತು.

ಆಗ ಸ್ವಲ್ಪ ನರಂ ಆದೆ. ಅದನ್ನು ಕಂಡೋ ಏನೋ ಆತ ಸರಿದನಿಯಲ್ಲಿ ಸಂಡಿಗೆ ಕರಿದ ಹಾಗೆ ಸ್ಪಷ್ಟವಾಗಿ ಹೇಳಿದ. 'ಹಿರಿಯರಾದವರು, ಹಳೆಯ ಗೆಳೆಯರು

ಸ್ವತಂತ್ರವಾಗಿ ಮಾತನಾಡುವುದನ್ನು ಕೇಳುವುದಕ್ಕೆ ನನ್ನಂತವರಿಗೆ ಬಲು ಮೋಜು. ಅದರಿಂದ ಪಾಠ ಕೂಡ ಕಲಿಯಬಹುದು" ಎಂದು.

ಆ ವೇಳೆಗೆ ನಮ್ಮ ಎಂ. ಎಸ್ ಬಂದ. ಏನೋ ಎಂ. ಎಸ್. ? ಸಾಮಿ ಬಂದಿದ್ದು ನಿನಗೆ ಹೇಗೆ ಗೊತ್ತಾಯ್ತೋ ಅಂದೆ ಆಗ ಸಾಮಿ ಹೇಳಿದ. "ನೋಡು ರಾವ್ಜೀ! ಇವರಿಬ್ಬರೂ ನನ್ನ ಹಳೆಯ ಸ್ನೇಹಿತರು. ಇವ ಕೊರವ, ಇವ ಲಚ್ಚು-ಲಕ್ಷ್ಮಣ ಎಂದುದು ನಮ್ಮ ಕಡೆಗೆ ತಿರುಗಿ ಈತ ನನ್ನ ಮೊದಲ ಆಫೀಸರ್ ರಾಮರಾಯರ ಮಗ. ಈಗೆ ನನ್ನ ಜತೆ ಅಫೀಸರಾಗಿ ವರ್ಗವಾಗಿ ಬಂದಿದ್ದಾನೆ—ಬಹಳ ಶಹಣೆ ಇದ್ದಾನೆ, ನಮ್ಮ ಚಿರಂಜೀವಿ ಶಾಮರಾವ್ ಎಂದ.

"ಏನೋ ಎಂ. ಎಸ್.! ಈ ಟೀ. ಟೀ. ಕೆ. ಗಲಾಟೆಯಲ್ಲಿ ಷೇರು ಮಾರ್ಕೆಟ್ ಇಳಿದೇ ಹೋಯ್ತುಂತಲ್ಲೋ! ನಿನಗೆ ಇವರಿಂದ ಪೆಟ್ಟು ತಾಕಿತೀನೋ ಎಂದು ಕೇಳಿದೆ.

ಎಂ. ಎಸ್. ಅಂದ ಆಗ, ಹುಬ್ಬು ತೀಡುತ್ತಾ, ಟಿ ಟಿ. ಕೆ. ಯಿಂದ ನನಗೇನು ಲುಕ್ಸಾನೋ, ಮುಂಧ್ರಾ ಜತೆಗೇ ನನ್ನ ಷೇರುಗಳನ್ನೆಲ್ಲವನ್ನೂ ನಾನು ಮಾರಿಕೊಂಡೆ. ಈಗ "ಇಳಿದು ಬಾ ತಾಯಿ, ಇಳಿದು ಬಾ. ಆಗ ಸೆಳೆಯುವೆನು ನಿನ್ನನು ನನ್ನ ಜಟೆಗೆ. ಅಂದಿನಾ ಶಿವನಂತೆ ಇಂದು ಕಾದಿಹೆನು ತಾಯಿ, ಇಳಿದು ಬಾ" ಎಂದು ಷೇರು ಬೆಲೆಯ ತಾಯಿಗೆ ಶೋಭಾನೆ ಹಾಡುತ್ತಿದ್ದೇನೆ" ಎಂದ.

ಶಾಮರಾಯ ಆಗ ಸ್ವಾಮಿಯ ಕಡೆ ತಿರುಗಿ "ಸಾರ್! ಲಕ್ಷ್ಮಣರಾಯರು ಎಂದು ಇವರನ್ನು ನೀವು ಪರಿಚಯ ಮಾಡಿಸಿಕೊಟ್ಟ ಹಾಗೆ ಕೇಳಿಸಿತು. ಎಂ.ಎಸ್. ಅಂತ ಅವರನ್ನೇಕೆ ಕರೆಯುತ್ತಿದ್ದೀರಿ ? ಇದು ನನಗೆ ಅರ್ಥವಾಗಲಿಲ್ಲವಲ್ಲ ಎಂದು, ಮಗುವಿನಂತೆ ಕೇಳಿದ.

ಹುಂಜದಂತೆ ಕೊ, ಕ್ಕೊ, ಕೋ, ಅಂದ, ಟಿ. ಟಿ. ಕೆ. ತಾಳಕ್ಕೆ ದನಿಗೂಡಿಸುತ್ತಿದ್ದ ಎಂ. ಎಸ್. ಒಂದು ನಿಮಿಷ ಸುಸ್ತಾದ. ನಾನೂ ಸ್ವಾಮಿ ತಡೆಯಿಲ್ಲದೆ, ಅಲೆಯಲೆಯಾಗಿ ನಕ್ಕೆವು. ತುಟಿಯ ತುದಿಯಿಂದ ಹೊರಟ ನಗುವು ಕೆನ್ನೆಯನ್ನಾವರಿಸಿ ಗಲ್ಲಕ್ಕೆ ಇಳಿದು, ಕತ್ತಿನ ಒಂದೊಂದು ಪದರವನ್ನೂ ಎರಡು ನಿಮಿಷ ಆವರಿಸಿ ನಂತರ ಮೂರನೆಯ ಕತ್ತಿನ ಪದರಕ್ಕೆ ಬಂದಾಗ ಇಡೀ ವ್ಯೆಯನ್ನೇ ಕುಲುಕಿ, ಕುಲುಕಿ, ಕಡೆಗೆ ಕುಳಿತ ಕುರ್ಚಿ ಕೇಕೆ ಹಾಕುವಂತಾದಾಗಲೇ, ನಗುವನ್ನು ನಾವು ನಿಲ್ಲಿಸಿದ್ದು. ಎಲ್ಲಿ ಬಿದ್ದು ಬಿಡುತ್ತೀವೋ ಎಂಬ ಭಯದಿಂದ. ನಂತರ ಸ್ವಾಮಿ ಹೇಳಿದ.

ಸಂಗೀತ ವಿದುಷಿ, ಪದ್ಮ ವಿಭೂಷಣೆ, ಈಶ್ವೈವಾಣಿ ಇತ್ಯಾದಿ ನಮ್ಮ ಎಂ.ಎಸ್ ಸಂಗೀತ ಕಛೇರಿನ ೧೯೪೭-೪೮ ರಲ್ಲಿ ಯಾವ ಊರಿನಲ್ಲಿ ನಡೆಸಿದರೂ ನಮ್ಮ ಲಚ್ಚು ತಪ್ಪದೆ ಹಾಜರಾಗುತ್ತಿದ್ದ ಆ ಕಾರಣ ಅವನಿಗೆ ಎಂ.ಎಸ್. ಎಂದು ನಾವು ನಾಮ

ಕರಣ ಮಾಡಿದೆವು- ಎರಡು ವರ್ಷ ಆ ಹುಚ್ಚು ಅವನಿಗೆ ಹಿಡಿದಿತ್ತು. ಈಗ ಹೆಸರೊಂದೇ ಉಳಿದಿದೆ" ಎಂದು

ಆಗ ಶಾಮರಾಯ ತುಂಬು ನಗುವನ್ನು ನಕ್ಕ.

ಎಂ. ಎಸ್. ನ ಎಡಮೂಗಿನ ಹೊಳ್ಳೆಯು ಸರೋವರದಲ್ಲಿರುವ ಹಂಸದ ಕಾಲಿನಂತೆ ಹಾರತೊಡಗಿತು. ಸಾಮಾನ್ಯವಾಗಿ ಎಡ ಹುಬ್ಬನ್ನು ಎತ್ತುತ್ತಿದ್ದವ ಈಗ ಬಲಹುಬ್ಬನ್ನು ಕೆಳಕ್ಕೆ ಇಳಿಸಿದ. ಮುಖವೇ ವಿಚಿತ್ರವಾಗಿತ್ತು.

ಬಲುಕಾಲ ಬಲುನೊಂದು, ಆದರೂ ಅಣಕಿಸುವ ನಗು ಮುಖವ ತೋರುತ್ತಾ, ಎಂದಾದರೂ ನನ್ನದು ನನ್ನದೇ ಆಗುವುದು ಎಂದು ಸವೆದ ನವೆದ ಪುರುಷನು, ಕಡೆಗೆ, ಬಂದವನು ನಾನೊಬ್ಬನೇ, ಹೋಗುವನೂ ನಾನೊಬ್ಬನೇ-ಇರುವಾಗಲೂ ನಾನೊಬ್ಬನೇ ಎಂಬ ಸತ್ಯವನ್ನು ಅರಿತಾಗ-ಯಾವ ಮೂರನೇ ಬೇಸ್ತಿನ ಮುಖವಾಡ ತೋರುವನೋ-ಅದನ್ನೇ ಲಚ್ಚು ತೋರುತ್ತಿದ್ದ-ಆ ನಿಮಿಷದಲ್ಲಿ-

ಥರಥರಿಸುವ ಆದರೂ ಹತೋಟಿಗೆ ಪೂರ್ಣ ಒಳಗಾಗದ ತುಟಿಗಳಿಂದ ಎಂ.ಎಸ್ ಹೇಳಿದ- " ಇಂತಹಾ ಸರ್ಕಾರಿ ಅಧಿಕಾರಿಗಳಿರುವ ದೆಸೆಯಿಂದಲೇ, ಸರ್ವ ಸೇವೆ ಯನ್ನು ದೇವಸಾಕ್ಷಿಯಾಗಿ ಕೈಕೊಂಡ ಸಚಿವರುಗಳು ಕೂಡ ಎಡವಿ ಬೀಳುವುದು ಎಂದು.

ಒಂದು ಅರೆ ಕ್ಷಣ ಶ್ಯಾಮರಾಯನ ಮುಖದಲ್ಲಿ, ಕಿರಿನಗೆ ಮಾಯವಾಯಿತು. ಮರುಕ್ಷಣದಲ್ಲೇ ಕಿರಿನಗೆ ತುಟಿಯ ಮೇಲೆ ತಾಂಡವವಾಡಿತು. ಆಗ ಅವನಂದ.

" ಭಾರತಕ್ಕೆ ಸ್ವಾತಂತ್ರ್ಯ ಬಂದಾಗ, ಹಿರಿಯ ನಾಯಕರೆಲ್ಲ ಇಬ್ಭಾಗವಾದ ದುಃಖದಲ್ಲಿ ಕೊರಗಿ ಸುಸ್ತಾದಾಗ, ನಮ್ಮ ನಮ್ಮವರೇ ಸೆಟೆದು ನಿಂತು, ಅರಾಜ್ಯಕತೆ ಹೂಡದಂತೆ ಹೊಣೆಯ ಹೊತ್ತು ನಿಂತರು. ಉತ್ಸಾಹದಿಂದ ನಮಸ್ಕಾರ ಹಾಕಲಿಕ್ಕೆ ಹೋಗಿ ಗುಡಿಗೋಪುರ ತಲೆ ಮೇಲೆ ಕೆಡವಿಕೊಳ್ಳುವವರಂತೆ ಸರ್ವಸ್ವವನ್ನೂ ಪಣ ಇಟ್ಟು ದೇಶಸೇವೆ ಮಾಡಿದರು.

ಭಾರತವು ಆಗ, ಆಕ್ರಮಣಕಾರರಾದ ಆಂಗ್ಲೇಯರನ್ನು ಮಾತ್ರ ಹೊರದೂಡು ತ್ತಿರಲಿಲ್ಲ! ಶತಮಾನಗಳ ಹಿಂದೆ ಆಕ್ರಮಣಕಾರರಾದ ಮಧ್ಯಪ್ರಾಚ್ಯದ ಮಹಮ್ಮದೀ ಯರನ್ನೂ ಕೂಡ ಹೊರಹಾಕುತ್ತಿತ್ತು. ಭಾರತದಲ್ಲಿ ಉಳಿದ ಆ ಜಾತೀಯರು ನಮ್ಮ ನಮ್ಮವರೇ! ಹಿಂದೆಂದೂ ಚರಿತ್ರೆಯಲ್ಲೆ ಈ ರೀತಿ ನಡೆದ ಪವಾಡದ ವರದಿ ಇಲ್ಲ.

ಇಂತಹ ದೈವೀಯ ಪವಾಡ, ಭಾರತೀಯ ಅಧಿಕಾರಿಗಳಿಂದ ಸಾಧಿಸಲ್ಪಡು ವಾಗ, ಅವರು ಆತ್ಮ ದೈನ್ಯದಿಂದ ಸ್ವಾಭಿಮಾನದಿಂದ ದೇವ, ದೇಶ, ಸೇವೆಮಾಡುವ ಅವಕಾಶ ತಮದೆಂದು ಮಾಡಿದರು—ಪವಾಡ ಸಾಧಿಸಲೋಸುಗ ಅಲ್ಲ-ಚರಿತ್ರೆಯು ಮಲೇರಿಯಾದಂತೆ ಮರಕಳಿಸುತ್ತದೆ—

ಅವರು ಇಂದು ಅವಮಾನಿತರಾಗಬಹುದು, ಆದರೆ ಭಾರತದಲ್ಲಿ ತಿಳಿದವರಿದ್ದೂರಲ್ಲಿ, ಅರಿತವರಿದ್ದ ರಸ್ತೆಗಳಲ್ಲಿ, ತಲೆಯನ್ನು ತಗ್ಗಿಸದೇ ಆತ್ಮವಿಶ್ವಾಸದಿಂದ ಅವರು ಅಡಿ ಇಡುವರು ಎಂದು.

ಸ್ವಾಮಿ, ಎಂ ಎಸ್ ಇಬ್ಬರೂ ಕೇಕೆ ಹಾಕಿ ನಕ್ಕರು. ಇದನ್ನು ಕೇಳಿ ಅರ್ಥಮಾಡಿಕೊಳ್ಳಲೊಲ್ಲದೆ—ಅರ್ಥಮಾಡಿಕೊಳ್ಳಲಾರದೆ !

ಎಂದೆಂದೂ, ಅದೂ ಸಂಜೆಯಲ್ಲಿ ಕಿಲಿ ಕುಲಗುಟ್ಟಿಸುವ, ಕಿಲಕಿಲ ಪಡುವ ಕೊರವ, ಸುಮ್ಮನಿದ್ದ, ಗಂಭೀರವಾಗಿ.

ಎಲ್ಲರೂ ಎದ್ದಾಗ, ಕೊರವ ಕೇಳಬಾರದ ಪ್ರಶ್ನೆಯನ್ನು ಕೇಳಿದ : 'ಶಾಮರಾಯರೇ ನಿಮ್ಮ ವಯಸ್ಸೆಷ್ಟು ? ಕೇಳಿದ ದನಿಯಲ್ಲಿ ಆತ್ಮ ಮೈತ್ರವನ್ನರಿತ ಶ್ಯಾಮರಾಯ ಮೂವತ್ತಾರು ಎಂದ, ಕೋಪವಿಲ್ಲದೆ.

ಅರಿವು ಬಾರದಿದ್ದರೂ ವಯಸ್ಸು ಬಂದ ಹಕ್ಕಿನಿಂದ ಕೊರವ ಮನದಲ್ಲಿ ಶಾಮರಾಯನ ತಲೆ ನೇವರಿಸುತ್ತಾ, ಬಹಿರಂಗವಾಗಿ ಹೇಳಿದ " ಚಿರಾಯುಷ್ಮಂತನಾಗಯ್ಯಾ ! " ಎಂದು

ಚಿರಂಜೀವಿ ಬಲು ಚೆನ್ನು ; ಅರಿಯಲಿಕ್ಕೆ-ಎಂದೂ ಅಂದುಕೊಂಡ ಕೊರವ

---



ರಾಮ ಮಂಧ್ರ್ರದ ಸಂಗೀತ ಕಚೇರಿಗಳು ಪರೀಕ್ಷೆ ಸಮಯದಲ್ಲೇ ಧ್ವನಿವರ್ಧಕದಿಂದ ಹೊರವಾಗಿ ಬರಬೇಕೇ! !

# ಮಣ್ಣು ತಿನ್ನು!

---

" ಇಲ್ಲಿ ಕೇಳಿ, ಅಂದ್ರೆ! ಆತ, ಪಾಪ, ಬಂಗಾಳದಿಂದ ಇಷ್ಟುದೂರ ಬಂದು, ಈ ಮಲೆನಾಡು ಕೊಂಪೆಯಲ್ಲಿ, ಮಲೇರಿಯಾ ಸೊಳ್ಳೆಗಳ ಕಡಿತವನ್ನೂ ಸಹಿಸಿ, ನಮ್ಮ ಮನೆಯಲ್ಲಿದ್ದುಕೊಂಡು ತನ್ನ ಸಂಶೋಧನೆಗಳನ್ನು ನಡೆಯಿಸುವುದಕ್ಕೆ ಸಿದ್ಧವಾಗಿರುವಾಗ........"

—ಎಂದಳು ಶ್ರೀಕಂಠಯ್ಯನ ಬಿ.ಎಸ್.ಸಿ. ಹೆಂಡತಿ.

" ಏನಂತೆ ಅವನ ಹಾಳು ಸಂಶೋಧನೆಯ ಉದ್ದೇಶ....ಮಣ್ಣು ಹುಯ್ದುಕೊಳ್ಳುವುದು ತಾನೆ, ತಲೆಯ ಮೇಲೆ ? "

" ಹಾಗೆಲ್ಲ ಅನ್ನಬೇಡಿ ನನ್ನ ಕಾಲೇಜು ಪ್ರೊಫೆಸರ್ ಆ ಬಂಗಾಲಿಗೆ ನನ್ನ ಪರಿಚಯ ಮಾಡಿಕೊಟ್ಟರು. ಅವರಿಗೆ....ಅವರಿಗೂ ಕೆಮ್ಮಣ್ಣು, ರಾಶಿ ರಾಶಿ ಸಿಗುವ ಒಂದು ಜಾಗ ಬೇಕಾಯಿತು, ಅದಕ್ಕೋಸ್ಕರ ಅವರು ಇಲ್ಲಿಗೆ ಬರುತ್ತಿದ್ದಾರೆ,.... ನೀವು ನಾಳೆ ಬಸ್‌ಸ್ಟಾಂಡಿಗೆ ಹೋಗಿ, ಅವರನ್ನ ಕರೆದುಕೊಂಡು ಬರಲೇಬೇಕು ?

" ಥೂ ! ನನ್ನ ಕೈಯಲ್ಲಾಗುವುದಿಲ್ಲ! "

" ಇಲ್ಲಿ ಕೇಳಿ, ಇಲ್ಲಿ!, ಬಿ.ಎಸ್.ಸಿ. ಪಾಸುಮಾಡಿರೋ ಹೆಂಡತಿಯನ್ನು ಪಡೆದಿರುವ ಪುಣ್ಯ ನಿಮ್ಮದು! ಜಗತ್ತನ್ನು ಉದ್ಧಾರಮಾಡುವ ಆ ಬಂಗಾಲಿಯ ಸ್ನೇಹಿತ ಎಂಬ ಕೀರ್ತಿಯೂ ನಿಮ್ಮದಾಗಲಿ! "

" ಹೇಗಂತೆ, ಅವನು ಜಗತ್ತನ್ನು ಉದ್ಧಾರ ಮಾಡುವುದು ? "

" ಅದು ಇನ್ನೂ ಗುಟ್ಟು ಗುಟ್ಟು! ಯಾರಿಗೂ ಹೇಳಬಾರದಂತೆ.. ....ಈ ಬಂಗಾಲಿ ಪಿ.ಎಚ್‌ಡಿ. ಮಹಾಶಯ, ಕೆಮ್ಮಣ್ಣಿಗೆ ಏನೇನೋ ಮಾಡಿ, ಅದನ್ನ ಮನುಷ್ಯ ತಿಂದು ಬದುಕುವಂತೆ ಮಾಡುತ್ತಾನಂತೆ "

" ಯಾವುದನ್ನ ತಿನ್ನುವುದಂತೆ ? "

" ಕೆಮ್ಮಣ್ಣು! ನಮ್ಮ ಮನೆ ಮುಂದಿನ ಗುಡ್ಡಾನ! "

" ಅದನ್ನ ತಿನ್ನಿಸುತ್ತಾನೆಯೇ ನನಗೆ? ನನ್ನ ಮನೆಯಲ್ಲಿ ತಂಗಿ, ನನ್ನ ಅನ್ನವನ್ನುಂಡು...."

" ತಿನ್ನಿಸಿದ, ಅಂತಲೇ ಇಟ್ಟುಕೊಳ್ಳಿ....ಆದರೂ, ಯೋಚಿಸಬಾರದೆ ನೀವು ? ಕೆಮ್ಮಣ್ಣು ತಿಂದು ಬದುಕಬಹುದು ಅಂತಾದರೆ, ದುಡಿತ, ಬಡತನ, ಬೆವರು, ಬೇಸಾಯ ಎಲ್ಲವೂ ಮಂಗಮಾಯ "

" ನಿನಗೂ ಹುಚ್ಚು! ಆ ಬಂಗಾಲಿಗೂ ಹುಚ್ಚು! ಹಾಳಾಗಿ ಹೋಗಿ ನಾನು ಅತ್ತಕಡೆ ಬರುವುದೇ ಇಲ್ಲ....ನಿನ್ನ ಪ್ರೊಫೆಸರ್ ಪತ್ರಾನ ನೀನು ತಿರಸ್ಕರಿಸಬೇಡ...."

—ಹೀಗೆಂದು ಶ್ರೀಕಂಠಯ್ಯ ವಾದಿಸಿ ಸೋತ. ಬಸ್ ಸ್ಟ್ಯಾಂಡಿಗೂ ಹೋಗಿ, ಆ ಬಂಗಾಲಿ ಪಿ.ಎಚ್‌ಡಿ. ಯನ್ನು ಮನೆಗೆ ಎಳೆದು ತಂದು, ಅವನನ್ನು ಮನೆಯ ಮಹಡಿಯ ಮೇಲಕ್ಕೆ ಸಾಗಿಸಿ, ಶ್ರೀಕಂಠಯ್ಯ ತನ್ನ ಹೆಂಡತಿಯನ್ನು ದುರುಗುಟ್ಟಿ ನೋಡುತ್ತ, "ಏನೇ ಆಗಲಿ! ಮೂರು ತಿಂಗಳು ಉಪವಾಸ ಬೀಳಬೇಕಾಗಿ ಬಂದರೂ ನಾನು ಮಾತ್ರ ಆ ಬಂಗಾಲಿ ಕೊಡುವ ಕೆಮ್ಮಣ್ಣನ್ನು ತಿನ್ನುವುದೇ ಇಲ್ಲ" ಎಂದು ಕಿರುಚಿದ.

ಮಹಡಿಯ ಮೇಲೆ ಆತ ತಳ ಊರಿ, ತನ್ನ ಶೀಷೆ ಒಲೆ ತಿದಿ ಕೊಳವಿ ಪಂಪು ಇತ್ಯಾದಿಗಳನ್ನು ಜೋಡಿಸಿ, ವಾರವಾಯಿತು! ಅಟ್ಟದ ಮೇಲಿಂದ ಆಗಾಗ ಕೇಳಿ ಬರುತ್ತಿದ್ದ, ದಡಬಡಾಟಗಳಿಂದ ಬೇಸತ್ತು, ಒಂದು ದಿನ ಶ್ರೀಕಂಠಯ್ಯ ಮೆಟ್ಟಿಲು ಹತ್ತುವ ಧೈರ್ಯಮಾಡಿದ.

ಆಗ, ಅಲ್ಲಿ, ಆ ಬಂಗಾಲಿ ಮಹಾಶಯ ಅವನ ಹೆಂಡತಿಗೆ ತನ್ನ ಸಂಶೋಧನೆಯ ವಿವರಗಳ ವರದಿ ಒಪ್ಪಿಸುತ್ತಿದ್ದ. ಶ್ರೀಕಂಠಯ್ಯನೂ ಅಲ್ಲಿ ಹಾಸಿದ್ದ ಜಮಖಾನೆಯ ಮೇಲೆ ಕುಳಿತು, ಕಿವಿ ನೀಡಿದ.

ಒಲೆಯ ಮೇಲಿದ್ದ ಬಾಣಲಿಯ ತುಂಬ ಕೆಮ್ಮಣ್ಣಿತ್ತು. ಅದರಿಂದ ಒಂದು ಚಮಚವನ್ನು ತೆಗೆದು, ಎಡಗೈಗೆ ಸುರಿದು, ಊದಿ, ಆರಿಸಿ....ಬಂಗಾಲಿ ಸಂಶೋಧಕ ತನ್ನ ಬಾಯೊಳಗೆ ಹಾಕಿಕೊಂಡು, ಅಗಿದು, ನುಂಗಿದ!

"ತಂಗಿ! ನಿಮಗೂ ಕೊಡುತ್ತಿದ್ದೆ! ಆದರೆ, ಅಭ್ಯಾಸವಿಲ್ಲದವರಿಗೆ ಇನ್ನೂ ಇದರ ರುಚಿ ಒಗ್ಗದು! ಇಲ್ಲೇ ಮಲೆನಾಡಿನಲ್ಲಿ ಹೇರಳವಾಗಿ ಸಿಗುವ ಒಂದು ಹಸು ರೆಲೆಯ ಪುಡಿಯನ್ನು ಇದಕ್ಕೆ ಬೆರೆಸಿದ್ದೇನೆ... ಅದ್ದರಿಂದ, ರುಚಿ ಎಷ್ಟೋ ಒದಲಾವಣೆ ಆಗಿದೆ ಆ ಎಲೆಯನ್ನೂ ಕೊಂಚ ಹುರಿಯಬೇಕೋ ಏನೋ? ನಾಳೆ ಅದನ್ನೂ ಮಾಡಿ ಅದರ ಪುಡಿಯನ್ನೂ ಬೆರಸಿ, ಬಾಣಲಿಯಲ್ಲಿ ಬಿಸಿ ಮಾಡಿದರೆ, ಖಂಡಿತ, ನೀವೂ ತಿನ್ನಬಹುದು, ನಿಮ್ಮ ಹಸ್ಬಂಡೂ ತಿನ್ನಬಹುದು!....ನೋಡುತ್ತಾ ಇರಿ, ನನ್ನ ಈ ಸಂಶೋಧನೆ ಸಫಲವಾದರೆ, ಆಹಾರ ಸಮಸ್ಯೆಯೇ ನಾಸ್ತಿ! ಸಂತಾನ ನಿರೋಧವೇ ಅನವಶ್ಯಕ! ಕೆರೆ ಕಟ್ಟೆ ಕಾಲುವೆ ಸಿಂದ್ರಿ ಸಿಬ್ಬಂದಿ ಸುಗ್ಗಿ ಕುಡುಗೋಲು ಎತ್ತು ದನಸ ಜಾತ್ರೆ ಟ್ರ್ಯಾಕ್ಟರು ಅಲೂಗೆಡ್ಡೆ ಉಪ್ಪಿನಕಾಯಿ ಎಲ್ಲವೂ ವ್ಯರ್ಥ! ಜೈ ಕೆಮ್ಮಣ್ ಕೀ!" ಎಂದು ಆ ಬಂಗಾಲಿ ಕೂಗುತ್ತ, ಶತಪಥ ತಿರುಗಿದ!

ಮಾರನೆಯ ದಿನ ಆ ಮಲೆನಾಡಿನ ಹಳ್ಳಿಯಲ್ಲಿ ಗುಲ್ಲೋ ಗುಲ್ಲು! ಏಕೆಂದರೆ, ತಾನು ತಯಾರಿಸಿದ ಕೆಮ್ಮಣ್ಣನ್ನು ಶಿಶುಗಳು ತಿಂದು ವಾಂತಿಮಾಡದೆ ಬದುಕಬಲ್ಲವೋ

ಎಂದು ಸಂಶೋಧಿಸಲು ಆ ಬಂಗಾಲಿ, ಗ್ರಾಮದ 3 ಕೂಸುಗಳ ಬಾಯಿ ತೆಗೆಸಿ, ಒಂದೊಂದು ಚಮಚ ಒಳಕ್ಕೆ ಸೇರಿಸಿಬಿಟ್ಟನಂತೆ!

ಆತನ ಮೇಲೆ ಜನ ಉದ್ರೇಕಗೊಂಡದ್ದರಿಂದ, ಅದರ ಕಾವು ಶ್ರೀಕಂಠಯ್ಯನಿಗೂ ತಗಲಿತು! ಅವನ ಮನೆಯ ಸುತ್ತ, ಜನ ನಿಂತು, ಕಲ್ಲು ಬೀರಲಾರಂಭಿಸಿದರು.

ಶ್ರೀಕಂಠಯ್ಯನೂ ಅವನ ಬಿ.ಎಸ್.ಸಿ. ಹೆಂಡತಿಯೂ ಹೊಸ್ತಿಲಿಗೆ ಬಂದು, "ಆಹಾರ ಸಂಶೋಧನೆಯ ಮಹತ್ವವನ್ನೂ, ಮಣ್ಣು ತಿಂಬುವುದೇನು ಹೊಸ ಪದ್ಧತಿ ಅಲ್ಲವೆಂದೂ, ಗೋಪಾಲಕೃಷ್ಣಸ್ವಾಮಿಯೇ ಎಳೆಯ ಮಗುವಾಗಿದ್ದಾಗ, ಮಣ್ಣು ತಿಂದನೆಂದೂ, ಬಸುರಿಯರೂ ಈಗಲೂ ಕೆಮ್ಮಣ್ಣು ತಿನ್ನುತ್ತಾರೆಂದೂ, ಆದ್ದರಿಂದಲೇ ಶಿಶುಗಳಿಗೆ ಮೃತ್ ಭಕ್ಷಣದ ಮೇಲೆ ಅಷ್ಟು ಆಸೆ ಎಂದೂ, ಶ್ರೀಕಂಠಯ್ಯ ಭಾಷಣ ಮಾಡಿದ! ಇದನ್ನ ಕೇಳಿ, ಜನರ ಕೋಪ ಕೊಂಚ ಅಡಗಿತಾದರೂ, ಬಂಗಾಲಿಯನ್ನು ಆದಷ್ಟು ಬೇಗ ಊರಾಚೆ ಕಳುಹಿಸುವ ಭರವಸೆಯನ್ನು ಶ್ರೀಕಂಠಯ್ಯ ನೀಡುವ ವರೆಗೂ ಅವರು ಅಲ್ಲಿಂದ ಕದಲಲೇ ಇಲ್ಲ.

ಬಿ ಎಸ್.ಸಿ.ಗೂ ಹೆದರಿಕೆ ಹತ್ತಿತು. ಮಣ್ಣು ತಿನ್ನಿಸಲು ಹೊರಟಿರುವ ಈ ಅತಿಥಿಯಿಂದಾಗಿ, ಮನೆಗೆ ಬೆಂಕಿಬಿದ್ದರೂ ಬೀಳಬಹುದೆಂದು ಅವಳು ನಡುಗಿದಳು. ತನ್ನ ಪ್ರೊಫೆಸರಿಗೆ ಪತ್ರ ಬರೆದಳು. ಆತ, ಒಂದು ಅಪರೂಪ ಪ್ರಾಣಿ; ಏಕೆಂದರೆ, ಬುದ್ಧಿವಂತ! ಪರಿಸ್ಥಿತಿಯನ್ನು ಅರಿತು, ತಕ್ಕ ಉಪಾಯ ಹೂಡಿದ.

"ಎಲೆಗಳ ಪುಡಿ ಬೆರಸದೆಯೆ, ಬಾಣಲಿಯಲ್ಲಿ ಹುರಿಯದೆಯೆ, ಮನುಷ್ಯ ವೀಸೆ ವೀಸೆ ತಿಂದು ಪೂರೈಸಬಹುದಾದ ಕರೀಮಣ್ಣು ಉತ್ತರ ಕರ್ನಾಟಕದಲ್ಲಿ ದೊರೆಯು ತ್ತಿರುವಾಗ, ನೀನು ಮಲೆನಾಡಿನಲ್ಲಿ ನಿನ್ನ ಜನ್ಮದ ಬೆಲೆ ಏರಿದ ಭಾಗವನ್ನು ಕಳೆಯು ತ್ತಿರುವುದು ಶೋಚನೀಯ....ತಕ್ಷಣವೇ ನಿನ್ನ ಸಂಶೋಧನೆಗಳು ಕರಿ ನಾಡಿಗೆ ವರ್ಗಾ ಯಿಸಲ್ಪಡಲಿ" ಎಂದು ಆವರು ಬೆಂಗಾಲಿ ಪಿ.ಎಚ್.ಡಿ.ಗೆ ಉತ್ತರ ಬರೆದರು. ಅತ್ತ ಕಡೆಯ ಕೆಲವರ ವಿಳಾಸವನ್ನೂ ಒದಗಿಸಿದರು—ಎಲ್ಲ ಸುಳ್ಳು ಅಡ್ರೆಸ್ಸುಗಳು.

ಈಗ, ಆ ಬಂಗಾಲಿ ಆ ಅಡ್ರೆಸ್ಸುಗಳನ್ನೂ ಹಿಡಿದುಕೊಂಡು ಊರೂರು ಅಲೆಯುತ್ತಿದಾನೆ....ಅವಕಾಶ ಸಿಕ್ಕಿದಾಗ, ಕರಿ ಮಣ್ಣಿನ ರುಚಿ ನೋಡುತ್ತಿದಾನೆ. –

ಸಂಶೋಧನೆಕಾರರ ಸಂಕಟ ಜೀವನ ಅವನದು! ಜಯಲಕ್ಷ್ಮಿ ಒಲಿದರೆ, ಆಗ ಅವನಿಗೆ ನೋಬಲ್ ಪಾರಿತೋಷಕ ಖಂಡಿತ! ಬಡಜನರೆಲ್ಲರ ಬ್ರಹ್ಮಪಟ್ಟ ಅವನಿಗೆ ಮೀಸಲು.

—ಬಿ. ಪದ್ಮಾವತಿ.

---

# ರೈಲು ಲೇಟು

ಮೊನ್ನೆ, ಒಂಭತ್ತೂಕಾಲು ಗಂಟೆಗೆ ಹೊರಡಬೇಕಾದ ರೈಲು, ಹತ್ತು ಗಂಟೆಗೆ ಖಾಲಿ ಬಂತು, ಪ್ಲಾಟ್‌ಫಾರಂಗೆ! ನಿಂತು ನಿಂತು ಕಾಲು ನೋಯಿಸಿಕೊಂಡ ಜನರೂ ಹಸಿವಿನಿಂದ ಬಾಧೆಪಟ್ಟ ಮಕ್ಕಳು ಮರಿಗಳ ತಂದೆ ತಾಯಂದಿರೂ, ರೈಲ್ವೆ ಅಧಿಕಾರಿಗಳನ್ನು ಬೈದರು.

ಆದರೆ, ನಾನು ಮಾತ್ರ ಬೈಯ್ಯಲಿಲ್ಲ! ಏಕೆಂದರೆ, ನಾನು ಸ್ಟೇಷನ್ನಿಗೆ ಹೋಗುವ ಹೊತ್ತಿಗೆ ನನ್ನ ಗಡಿಯಾರದಲ್ಲಿ ಒಂಭತ್ತಾಗಿದ್ದರೂ, ಸ್ಟೇಷನ್ ಗಂಟೆ ಒಂಭತ್ತೂಮುಕ್ಕಾಲಾಗಿತ್ತು. ಆದರೂ ರೈಲು ಸಿಕ್ಕಿತಲ್ಲಾ, ಅಂತ ನಾನು, ನನಗಾಗಿ ಅದನ್ನು ಅಷ್ಟು ತಡಮಾಡಿ ಹೊರಡಿಸಿದ ಅಧಿಕಾರಿಗಳ ಹೊಟ್ಟೆ ತಣ್ಣಗಿರಲಿ— ಎಂದು ಅವರನ್ನ ಆಶೀರ್ವಾದಮಾಡಿದೆ. ಬೈಯ್ಯಲಿಲ್ಲ.

ನನ್ನ ಹಾಗೆ ಇನ್ನೂ, ಹತ್ತಾರು ಜನ, 9–45, 9–55, 9–56, 9–58 ಗೆ ಬಂದರು ಅವರಿಗೂ ರೈಲು ಸಿಕ್ಕಿತು. ಅವರೆಲ್ಲ ಭಗವಂತನ ಅಪಾರ ಕರುಣೆಯಿಂದ ತಮಗೆ ರೈಲು ಸಿಕ್ಕಿತು, ಎಂದುಕೊಂಡರು; ಅಧಿಕಾರಿಗಳ ಸೋಮಾರಿತನ, ಕರ್ತವ್ಯನಿಷ್ಠೆಯಲ್ಲಿ ಅವರಿಗಿರುವ ಆಲಸ್ಯ ಮನೋಭಾವ, Go slow ತತ್ವವನ್ನು ಅವರು ಆಚರಿಸುವ ರೀತಿ, 8–30 ಕ್ಕೇನೇ ನಿಲ್ದಾಣಕ್ಕೆ ಬಂದವರ ಗೋಳು, ಇವೊಂದನ್ನು ಅವರು ಲೆಕ್ಕಿಸಲಿಲ್ಲ. ಅಂತಹ ಅಧಿಕಾರಿಗಳನ್ನು ನಿಯಮಿಸಿ, ಅವರಿಗೆ ತಿಂಗಳು ತಿಂಗಳೂ ಕೈತುಂಬ ಸಂಬಳವಿತ್ತು, ಅವರನ್ನ ಬೇರೆ ಕಡೆಗೆ ವರ್ಗ ಮಾಡದೆ, ಈ ಊರಲ್ಲೇ, ಇದೇ ಸ್ಟೇಷನ್ನಲ್ಲೇ ಇರಿಸಿ, ತಮಗೆ ರೈಲು ಸಿಕ್ಕುವ ಹಾಗೆ ಮಾಡಿದ ಮಹನೀಯರಿಗೆ ಅವರು ಕೃತಜ್ಞತೆ ಸಲ್ಲಿಸಲಿಲ್ಲ. ನಾನು ಸಲ್ಲಿಸಿದೆ.

"ಭಗವಂತಾ! ನಿನ್ನಿಂದ ನಮ್ಮ ಪ್ರಯಾಣ ಇವತ್ತು ಸುಗಮವಾಯಿತು, ತಡವಾಗಿ ಬಂದರೂ" ಎಂದು ಅವರು ಉದ್ಗಾರ ತೆಗೆದರಲ್ಲಾ! ಭಗವಂತ ಏನುಮಾಡಿದ? ಸೋಮಾರಿಗಳನ್ನ, ಕರ್ತವ್ಯಪರರಲ್ಲದವರನ್ನ, ತಡಮಾಡುವವರನ್ನ, ಇತರರ ಕಷ್ಟ ಸುಖಗಳನ್ನರಿಯದವರನ್ನ, ಸೃಷ್ಟಿ ಮಾಡಿದ, ಅಷ್ಟೆ. ಆದರೆ, ಅಂತಹವರನ್ನ ಆರಿಸಿ ನೇಮಿಸಿ ಉಳಿಸಿ ಬೆಳೆಸಿದ್ದು, ...ಅದೊಂದು ಉತ್ತಮ ಕೆಲಸವಲ್ಲವೆ? ಅಂಥವರು ಅಲ್ಲಿ ಆ ದಿನ ನೌಕರಿಯಲ್ಲಿಲ್ಲದಿದ್ದರೆ, ರೈಲು ಒಂಭತ್ತೂಕಾಲಿಗೇ, ರೂಲ್ಸ್ ಪ್ರಕಾರ, ಹೊರಟೇಬಿಡುತ್ತಿತ್ತಲ್ಲವೆ, ಚುಕ ಪುಕ ಚುಕ ಪುಕ, ಎನ್ನುತ್ತ! ಅದನ್ನ ತಪ್ಪಿಸಿದರು ಅವರು 45 ನಿಮಿಷಗಳ ಕಾಲ ತಡಮಾಡಿ! ಯಾವ ಯಾವ ಪುಣ್ಯಾತ್ಮರು ಯಾವ

ಕಾರಣಗಳಿಂದ ಎಲ್ಲೆಲ್ಲಿ ನಿಂತುಬಿಟ್ಟಿದಾರೊ, ಎಲ್ಲರೂ ಬರಲಿ, ಎಂಬ ವಿಶಾಲ ಮನೋಭಾವ ತಾಳಿದರು ಅವರು....ನೂರಾರು ಜನಕ್ಕೆ ತೊಂದರೆಯಾದರೂ, ನಾಲ್ಕಾರು ಜನರಿಗುಪಕಾರ ಮಾಡಿಯೇ ತೀರುತ್ತೇವೆ, ಎಂದು ಅವರು ನಿಶ್ಚಯಿಸಿದರು. ಇದರಿಂದ, ಆ ನೂರಾರು ಜನಕ್ಕೂ ಅವರು ಒಂದು ಉತ್ತಮ ಪಾಠವನ್ನು ಕಲಿಸಿದರು. ಯಾರನ್ನೂ ಬಿಟ್ಟು ಹೋಗಬಾರದು, ಬರಬೇಕಾದವರೆಲ್ಲ ಬಂದ ಮೇಲೆಯೇ ನಾವು ಹೊರಡಬೇಕು, ಎಂಬುದೇ ಆ ಪಾಠ. ತಾವು ಮಾತ್ರ ಠಾಕೂಠಾಕ್ ರೈಲಲ್ಲಿ ಕುಳಿತು ಕೇರ್‌ಚೀಫ್ ಬೀಸುವುದು, ಹತ್ತು ಹನ್ನೆರಡು ಜನ ಓಡೋಡಿ ಮೆಟ್ಟಲು ಹತ್ತಿ ಮೆಟ್ಟಲು ಇಳಿದು ಏದುತ್ತ ಹಿಂದೆ ದೌಡಾಯಿಸುವುದು....ಇದು ಯಾವ ನ್ಯಾಯ ? ಏನನ್ಯಾಯ ?

ಇನ್ನೇನು ರೈಲು ಹೊರಡುತ್ತೆ ಎನ್ನುವಾಗ, ಊರಲ್ಲೆಲ್ಲ ಒಂದು ಲೌಡ್ ಸ್ಪೀಕರ್ ಜೀಪ್ ಸುತ್ತಾಡಿಸಿ, ಬರುವವರೆಲ್ಲ ಆದಷ್ಟು ಬೇಗ ಬನ್ನಿ, ಎಂದು ಕೂಗಿಸಿ, ಅವರು ಬಂದ ಮೇಲೆ ಕುಳ್ಳಿರಿಸಿ, ...ಅದು, ವಿಶಾಲ ಹೃದಯ. ಜನತಾ ಜನಾರ್ದನ ಸೇವಾ.

—ಪಾಟಾಳಿ.

---

## ಪಿಂಡ

ಬೇಡ ಮನವೆ, ಬೇಡಿಕೊಂಬೆನೊ ನಾನು
ಕಾಡದಿರು ಕ್ಲಾರ್ಕುಗಳ, ಮನವೆ !
ಮಾಡದಿರು ಹಿಂಸೆಯನವರಿಗೆ, ಸಂಕಟವ
ತೋಡಿದರೆ ಏನಹುದು ಮುಂದೆ ?

ಸಿಟ್ಟಿನಿಂ ಕ್ಲಾರ್ಕುಗಳ ಕೆಟ್ಟ ನುಡಿಯಲು ಬೇಡ
ಕೊಟ್ಟು ಕೈ ಮುಗಿಯುವುದು ಲೇಸು, ಮನವೆ !
ಪುಟ್ಟ ಕಾಣಿಕೆಯನೇ ಕೊಡದೆ ಬಾಯ್ಬಡಿದರೆ
ಕಷ್ಟ ತಪ್ಪದು ನಿನಗೆ, ಕೇಳು ಮನವೆ !

ಉಂಡ ಮನುಜರು ನೀವು ಉಣದವಗೆ ಪಿಂಡವನು
ಕೊಂಡೊಯ್ದು ಕೊಡಬೇಕು, ನಿತ್ಯ ಮನವೆ !
ಸಿರಿ ಸಾಲದವರಿಗೇ ಸಮನಾಗಿ ಹಂಚುವುದೆ
ಹಿರಿಯತನ ಆವಡಿಯ ನೀತಿ ಮನವೆ.

—ಬಿ. ಎಸ್. ರುದ್ರಪ್ಪ.

# ಸಿದ್ದಯ್ಯನ ಸಾವು

---

ಕಣ್ಣು ಮೆಳ್ಳಗೆ, ಬಾಯಿ ಸೊಟ್ಟಗೆ
ಮಾತು ಮೂಗಿನ ಮೂಲಕ!

ಬಾಚಿ ಕೂದಲ ತಿದ್ದಿ ಮೀಸೆಯ
ಹಿರಿಯರೆಲ್ಲರ ತೆಗಳುತ
ಉದ್ದಕೆ ಬೆಳೆದನು, ಸಿದ್ಧಯ್ಯ!

ವೃದ್ಧನಾದನು ಕಡೆಗು ಸಿದ್ಧನು
ಎಂಥದೋ ಜ್ವರ ಬಡಿಯಿತು

ಆಹ! ಊಹು!—ಎನುತ ಮಲಗಿದ
ವಿಷಮ ಶೀತವೊ ಡೆಂಗುವೊ
ಮತ್ತೆ ಬಂದಾ ಏಶ್ಯ ಫ್ಲೂವೊ
ಕತ್ತೆ ಕಾಲಿಂದೊದೆಯಿತೊ?

ಇಲ್ಲ, ಎಲ್ಲವು, ಬರಿಯ ನಟನೆಯೊ?
ತಿಳಿಯದೆಂದರು ವೈದ್ಯರು!

ಮಾವ ಬಂದರು, ತಾತ ಬಂದರು,
ನಂಟರಿಷ್ಟರು ಬಳಸಿ ನಿಂದರು,
ಕುಂಟುನೆಪಗಳ ಹೇಳುತ
ಬೇಗ ಬೇಗನೆ ಹೊರಟರು.

ಶಾಸ್ತ್ರಿ ಬಂದರು, ಕವಡೆ ಹರಡಿ
ಏನು ಎತ್ತ? ಸತ್ತ ಮೇಲೆ-
ಯಾನ ಮೇಷ ಎಣಿಸಿ ಗುಣಿಸಿ
"ಅಯ್ಯೋ! ಸಿದ್ಧಾ! ನರಕಸಿದ್ಧ"
ಎಂದರವನಾ ಎದುರಲಿ!

ಆಗ ಸಿದ್ಧನು ಎದ್ದು ಕುಳಿತನು
ಶಿರದ ಮೇಗಡೆ ಕೈಯ್ಯನಿರಿಸುತ
"ಅಯ್ಯೊ!" ಎಂದನು, ಕೋಪದಿ.

ಅದನು ಕೇಳುತ ಅವನ ತಾಯಿ
ಗಂಜಿ ಬಟ್ಟಲು ಕೆಡವಿ ಬಿದ್ದಳು
ಉಳಿದ ಇಸಮುಗಳಾಚೆ ನೆಗೆದರು
ಆಯಿತಾ ಯುಸ್ಸೆಂದು ಬಗೆದರು

ಸಿದ್ಧ ಮಾತ್ರ ಬಿದ್ದು ಹೊರಳುತ
ತಾಯಿ ತಂದೆಯರನ್ನೆ ತೆಗಳಿ
ಏತಕೆನಗೀ ಹುಟ್ಟು, ಸಾವು ?
ದೇವರೇತಕೆ ? ದಿಂಡರೇತಕೆ ?
ಜಾಗವೇತಕೆ, ಮಂತ್ರಿ ಪ್ರೇತಕೆ ?

ಎಂದು ಸಿದ್ಧನು ಗೋಳು ಕರೆದನು
ತನ್ನ ದಾರಿಯ ಪೂರ ಮರೆತನು
ಹಿಂದು ಮುಂದನು ನೋಡದೆ
ಉಸಿರು ಕಟ್ಟಿತು ಅವನಿಗೆ
ಮೇಲು ತುಟಿಗೂ ತಳದ ತುಟಿಗೂ
ಭಾರಿ ಅಂತರ ಬೆಳೆಯಿತು
ಅದರ ನಡುವಣ ಬಾಗಿಲಿಂದ
ಪ್ರಾಣ ಹಾರಿತು, ಹೊರಗಡೆ.

ಅದನು ಕಂಡು, ಮೂಗ ತುದಿಯಲಿ
ಬೆರಳ ಕೂರಿಸಿ ಜನಗಳು
ಕೊರಗಿ ಮರುಗಿ ದೂರು ಹೇಳಿದ
ರೀತ ನರಕವ ತಲಪಿದ.

ಗುಡುಗು ಮಿಂಚಗಳೆಲ್ಲ ಬಂದುವು
ಆನೆ ಸೊಂಡಿಲ ವರ್ಷ ಬಂದಿತು
ಕಡಲು ಉಕ್ಕಿತು ! ಸುಡುವ ಬೆಂಕಿಯು
ಕಾಡನೆಲ್ಲಾ ಸುಟ್ಟಿತು !
ಹಾವಿನಂತೆ ಗಾಳಿ ಚೀರಿತು
ಹೂವು ಪಟಪಟ ಉದುರಿತು
ಮೇವು ಮರೆತು ಎಮ್ಮೆ ಹಸುಗಳು
ಬೆದರಿ ಅಂಬಾ ಎಂದೆವು.

—ಚಿಕ್ಕತಾಪಯ್ಯ.

# ತಾವು ಹೇಳಬೇಕೂ ಸಾರ್

"ತಾವು ಹೇಳಬೇಕು ಸಾರ್! ಈಗ ಏನು ಮಾಡಬೇಕೂಂತ!" ಎಂದು ರಾಜೀವಪುರದ ಕಾಲೇಜಿನ ಕೆಮಿಸ್ಟ್ರಿ ಇಲಾಖೆಯ ಅಟೆಂಡರುಗಳೆಲ್ಲಾ ಕಿರಿಯ ಅಸಿಸ್ಟೆಂಟ್ ಪ್ರೊಫೆಸರನ್ನು ಕೇಳಿದರು.

"ನೀವು ಮಾಡೋದನ್ನೆಲ್ಲಾ ಮಾಡಿಬಿಟ್ಟು ಈಗ ಬಂದು ನನ್ನನ್ನು ಪೀಡಿಸಿದರೆ ನಾನು ತಾನೆ ಏನು ಮಾಡಲಪ್ಪ—ಆದರೂ ಏನೇನು ಮಾಡಿದಿರಿ, ಇದು ಯಾಕೆ ಹೀಗಾಯ್ತು ಎಂದು ತಿಳಿಸಿದರೆ ಮುಂದೆ ಏನಾದರೂ ಸಲಹೆ ಕೊಡುಕ್ಕಾಗುತ್ತೋ ನೋಡ್ತೀನಿ" ಎಂದರು ಅ|| ಪ್ರೊಫೆಸರು.

ಆಗ ಅಡವಪ್ಪ ಶುರು ಮಾಡಿದ. "ನಮ್ಮ ಲೆಕ್ಚರರ್ ಶಂಕರ್ ಅವರಿಗೆ ಮದುವೆ ಅಂತ ಗೊತ್ತಾಗುತ್ತಲೂನೂ ಅಟೆಂಡರುಗಳೆಲ್ಲಾ ಸಭೆ ಸೇರಿ ಮದುವೆ ಉಡುಗೊರೆ ಕೊಡಬೇಕು ಎಂದು ನಿರ್ಧರಿಸಿದೆವು. ಶಂಕರ್ ಅವರು ನಮ್ಮನ್ನೆಲ್ಲಾ ಬಲು ವಿಶ್ವಾಸದಿಂದ ನೋಡಿಕೊಳ್ಳುತ್ತಿದ್ದರು. ಮಧ್ಯಾಹ್ನ ವಿರಾಮಕಾಲದಲ್ಲಿ ಒಂದೊಂದು ಸಾರಿ ನಮ್ಮ ಜತೇಲೇ ಟೀ ಕುಡಿದು ಇಸ್ಪೀಟ್ ಕೂಡ ಆಡ್ತಾ ಇದ್ದರು. ಅವರು ಮೇಷ್ಟರು ನಾವು ಅಟೆಂಡರು ಎಂಬ ಬೇಧ ಭಾವನೆಯೇ ಅವರಿಗಿದ್ದಂತೆ ಕಾಣಲಿಲ್ಲ. ನಮ್ಮ ಹತ್ತಿರಾನೇ ಬೀಡಿ ಕೂಡ ಇಸುಕೊಂಡು ಸೇದಿಬಿಡೋರು. ಅದಕ್ಕೇನೆ ಚಂದಾ ಎತ್ತಿದಾಗ ಒಟ್ಟು ೩೦ ರೂಪಾಯಿ ಬಂತು"

ಸೀನಿಯರ್ ಶಂಭು ಮುಂದುವರೆಸಿದ "ಆಗ ಸಾರ್ ನಾನು ಹೇಳಿದೆ, ಶಂಕರ್ರವರು ಎಂ. ಎಸ್ಸಿಗೆ ಕೂತುಕೊಳ್ಳುತ್ತಾರೆ. ಆ ಕಾರಣ ಪೊಟಾಸಿಯಂ ಸೈನೈಡಿನ ಒಂದು ಪೌಂಡ್ ಬಾಟಲು ಮದುವೆ ಉಡುಗೊರೆಗೆ ಅಂತ ಕೊಟ್ಟುಬಿಡೋಣ" ಎಂದೆ. ಯಾಕೆ ಅಂದರು. "ಆ ವಸ್ತುವನ್ನು ಉಪಯೋಗಿಸಿಕೊಂಡೇ ಅವರು ತಮ್ಮ ಥೀಸಿಸ್ ಕೆಲಸ ಮಾಡ್ತಿರೋದು" ಎಂದೆ. ಆದರೆ ಎಲ್ಲರೂ ಛೇ! ಛೇ! ಉಂಟೆ! ಅಂದು ನನ್ನ ಬಾಯಿ ಮುಚ್ಚಿಸಿದರು

ಮದುವೆಗೆ ಸಿದ್ಧನಾದ ವರನಿಗೆ, ದೊಡ್ಡ ಪರೀಕ್ಷೆಗೆ ಕೂರುವವನಿಗೆ ಪೊಟಾಸಿಯಂ ಸೈನೈಡು ಉಡುಗೊರೆ ಕೊಡೋದು ಈ ಕಾಲದಲ್ಲಿ ಬಹಳ ಉಪಯುಕ್ತವಾದರೂ, ಲೋಕಾರೂಢಿಯಲ್ಲಿ ಅಪಾರ್ಥ ಆಗಬಹುದು. ಆದ್ದರಿಂದ ಆ ಸಲಹೆ ತಿರಸ್ಕೃತವಾದ್ದು ನ್ಯಾಯ ಎಂದು ಹೇಳಿದರು ಅ|| ಪ್ರೊಫೆಸರು.

ಶಿದ್ದ ಹೇಳಿದ ಅನಂತರ "ಸಾರ್ ಇನ್ನಿಲ್ಲಾಂದ ಹಾಗೆ ನಾನು ಹೇಳಿದೆ. ಲ್ರೋ! ಈ ಷೋಕಿ ಗೀಕಿ ಬೇಡ್ರೊ. ಸಂಪ್ರದಾಯದಂತೆ ಒಂದು ಬೆಳ್ಳಿ ಚೊಂಬು ಕೊಟ್ಟುಬಿಡೋಣ, ಇನ್ನೊಂದಿಷ್ಟು ದುಡ್ಡು ಎಲ್ಲರೂ ಹಾಕಿಬಿಡೋಣ ಅಂತ. ಆದರೆ ಎಲ್ಲರೂ ಮದುವೆಯಾಗೋವಾಗ ಇನ್ನೂ ಸಂಸಾರ ಹೂಡುವುದಕ್ಕೆ ಮುಂಚೆಯೇ ವರನ ಕೈಗೆ ನಾವು ಚೊಂಬು ಕೊಡೋದು ಚೆನ್ನಾಗಿಲ್ಲ, ಅದು ಹೆಣ್ಣು ಕೊಡುವ ಮಾವನ ಹಕ್ಕು ಅಂದರು ಸಾರ್" ಎಂದು.

ನಾಳೆ ಯೋಚನೆ ಮಾಡೋಣ "ನೀನು ಈ ಹಣ ಇಟ್ಟುಕೊಂಡಿರು ಹುಷಾರಾಗಿ ಅಂತ ಸೀನಿಯರ್ ಶಂಭು ಕೈಲಿ ಕೊಟ್ಟೆವು.

ಮಾರನೆ ದಿನ ಭಾನುವಾರ, ಆ ದಿನ ಎರಡು ರಜಾ ಅಂತ. ಮುಂದಿನ ದಿನ ರಜಾ ಕೊಟ್ಟಿದ್ದರು. ಮಂಗಳವಾರ ಮಧ್ಯಾಹ್ನ ಚಹಾಗೆ ಬೀಡೀಗೆ ಸೇರಿದಾಗ ಸೀನಿಯರ್ ಶಂಭು ಇದನ್ನು ಕೊಂಡು ತಂದುಬಿಟ್ಟಿದ್ದ ಸಾರ್, ಇದನ್ನು ಹೇಗೆ ಸಾರ್ ಕೊಡೋದು! ಎಂದು ವಿರೂಪಾಕ್ಷ ಮುಂದುವರೆಸಿದ.

"ಯಾವುದನ್ನು" ಅಂದರು ಅ|| ಪ್ರೊಫೆಸರು.

ವಿರೂಪಾಕ್ಷ ಸೀನಿಯರ್ ಶಂಭೂನ ತೋರಿಸಿದರು. ಆತ ಕಿಟಕಿ ಹತ್ತಿರ ಒಂದು ಕಾರ್ಡ್‌ಬೋರ್ಡ್ ಪೆಟ್ಟಿಗೇನ, ಮಡಿಬಟ್ಟೆ ಸೊಂಟದ ಮೇಲೆ ಏರಿಸುಲ್ಲವೇ ಆ ರೀತಿ ಹೊತ್ತುಕೊಂಡಿದ್ದ.

ಆಗ ಸೀನಿಯರ್ ಶಂಭು ಹೇಳತೊಡಗಿದ.

"ಸಾರ್! ನಮ್ಮ ಹತ್ತಿರ ಇದ್ದದ್ದು ಮೂವತ್ತು ರೂಪಾಯಿ. ಇಡೀ ವರ್ಷ ನಮ್ಮೆಲ್ಲರಿಗೂ ಸೆಕ್ಷನ್ ಕಂಟೆಂಜೆನ್ಸಿಯಿಂದ ಅಷ್ಟೇ ಪಾಲು ಸಿಗೋದು. ನಾನೇ ಕಂಟೆಂಜೆನ್ಸಿ ಹಂಚೋನು, ನಾನೇ ಇವರುಗಳ ಹೆಸರಿಗೆಲ್ಲಾ ಇಷ್ಟು ಇಷ್ಟು ಅಂತ ಚಂದಾಪಟ್ಟಿ ತಯಾರಿಸಿದೋನು. ಈ ಹೈಕಳಿಗೆಲ್ಲಾ ಹುಮ್ಮಸ್ಸು ಹೆಚ್ಚು, ಆಲೋಚನೆ ಮಂದ ಇನ್ನೂ ದುಡ್ಡು ಕೊಡಿ ಎಂದರೆ ಹೇಗೆ ಸಾರ್? ಅಲ್ಲದೆ ನನ್ನ ಭಾವ ವೈದ ಸೇಲ್ಸ್ ಟ್ಯಾಕ್ಸ್ ಆಫೀಸಿನಲ್ಲಿ ದಫೇದಾರ. ಅವನನ್ನು ಕರೆದುಕೊಂಡು ಅಜಮಿಲ್ ಅಂಗಡಿಗೆ ಹೋದೆ ಅಜಮಿಲ್ ದಿನಾಲೂ ಸೇಲ್ಸ್ ಟ್ಯಾಕ್ಸ್ ಕಛೇರಿಗೆ ಸುತ್ತೀ ಸುತ್ತೀ ಮೂರು ತಿಂಗಳಿನಲ್ಲಿ ಎರಡು ಜತೆ ಪಾಪಾಸು ಸವೆಸಿದ್ದಾನೆ. ದಫೇದಾರನ ಸಹಾಯ ಇಲ್ಲದೆ ಇದ್ದಿದ್ದರೆ ಇನ್ನು ನಾಲ್ಕು ಜತೆ ಪಾಪಾಸಾದರೂ ಸವೆಸಬೇಕಾಗಿತ್ತು. ಆದ್ದರಿಂದ ಅಜಮಿಲ್ ಹೇಳಿದ್ದ ಅವನಿಗೆ ನಮ್ಮ ಅಂಗಡೀಲಿ ಯಾವ ಸಾಮಾನು ಕೊಂಡರೂ ಅಸಲ್ ಬೆಲೆಗೆ, ಸೇಲ್ಸ್ ಟ್ಯಾಕ್ಸ್, ಬಿಲ್ಲು ಕೂಡ ಇಲ್ಲದೆ ಕೊಡುತ್ತೇನೆ ಎಂದು. ಆದ್ದರಿಂದಲೇ ಅಲ್ಲಿಗೆ ಹೋದೆ. ಅಜಮಿಲ್ ೩೦ ರೂಪಾಯಿಗೆ ಇದು, ಬೇರೆಯವರಿಗೆ ಮಾರಿದರೆ ೬೦, ಆ ಬೆಲೆ ಚೀಟೀನೇ

ಅಂಟಿಸಿ ಕೊಡ್ತೀನಿ, ಸುಲಭವಾಗಿ ಕಾಣದ ಹಾಗೆ ಅಂತಂದ. ನೋಡುಕ್ಕೆ ಡಿಖಾ ವಾಗಿತ್ತು, ಆದರೂ ಯೋಚಿಸುತ್ತಾ ತಲೆ ಕೆರೆದುಕೊಂಡೆ. ಆಗ ಈ ಮಖಮಲ್ ಕಾರ್ಡ್‌ಬೋರ್ಡಿನ ಪೆಟ್ಟಿಗೆ ತೋರಿಸಿದ. ಇದರಲ್ಲಿ ಅಣಿಯಾಗಿ ಪ್ಯಾಕ್‌ಮಾಡಿ ಕೊಡ್ತೀನಿ, ಈ ರಾಧಾಕೃಷ್ಣ ಅವರ ಬೊಂಬೇನೂ ಕೊಡ್ತೇನೆ, ಇದೆಲ್ಲಾ ಪುಕಟ್ಟೆ ದಫೇದಾರರಿಗೆ ಅಂತ, ಎಂದು ಹೇಳಿದ.

ಅಷ್ಟೇ ಅಲ್ಲದೆ, ನನಗೂ ದಫೇದಾರನಿಗೂ ಒಂದೊಂದು ಮೋಹಿನಿ ಕ್ಯಾಲೆಂಡರೂ ಕೊಟ್ಟ ಸಾರ್. ಆಗ ಇದನ್ನು ಕೊಂಡುಕೊಂಡೆ. ಇಷ್ಟು ಕಷ್ಟಪಟ್ಟು ಇಂತಹ ಉಡುಗೊರೆ ತಂದು ಕೊಟ್ಟರೂ ಕೂಡ ಇವರೆಲ್ಲಾ ನನ್ನ ಮೇಲೇ ಹಾರಿ ಬೀಳ್ತಾ ಇದ್ದಾರೆ” ಎಂದು.

ಅ|| ಪ್ರೊಫೆಸರು ಆ ಪೆಟ್ಟಿಗೆ ಮೇಲೆ ಕಣ್ಣಿಟ್ಟಿದ್ದರು. ಉಳಿದವರೆಲ್ಲಾ ಪೆಟ್ಟಿಗೆ ನೋಡೇನು ಪ್ರಯೋಜನ! ತೆಗೆಸಿ ನೋಡಿ ಸಾರ್! ಎಂದು ಹೇಳಿದರು.

ಸೀನಿಯರ್ ಶಂಭು ಆಗ ಮುಂದುವರೆದ. ಅಜಮಿಾಲ್ ಇದನ್ನು ಇಷ್ಟು ಚೆನ್ನಾಗಿ ಪ್ಯಾಕ್ ಮಾಡಿಕೊಟ್ಟಿದ್ದಾನೆ. ಇದನ್ನು ಒಡೆದು ತೋರಿಸಿದೆ ನಿನ್ನೆ ಇವರಿಗೆಲ್ಲಾ ನಂತರ ಅಜಮಿಾಲನ ಅಂಗಡಿಗೆ ಹೋಗಿ ಗೋಗರೆದು ತಿರುಗಿ ಪ್ಯಾಕ್ ಮಾಡಿಸಿಕೊಂಡು ಬಂದಿದೇನೆ ಸಾರ್” ಎಂದ.

“ಇದು ಬೇಡವೇ ಬೇಡ ಹಿಂತಿರುಗಿ ಕೊಟ್ಟುಬಿಡು, ಅಂತ ನಾವೆಲ್ಲಾ ಹೇಳಿದೆವು ಸಾರ್” ಅಂತ ಎಲ್ಲರೂ ಒಟ್ಟಿಗೆ ಹೇಳಿದರು.

“ಹಾಗಾದರೆ ಕಂಟೆಂಜೆನ್ಸಿಯಿಂದ ಈ ವರ್ಷ ನಿಮಗೇನೂ ಸಿಗಲ್ಲ ಅಂತ ನಾನಂದೆ ಸಾರ್” ಅಂದ ಸೀನಿಯರ್ ಶಂಭು.

ಎಲ್ಲರಿಗೂ ಗೊತ್ತು ಸೀ|| ಅ|| ಪ್ರೊಫೆಸರ್ ಮತ್ತು ಸೀ|| ಅಟೆಂಡರು ಆಯಾ ಪಾಲಿಗೆ ಅವರೇ ಧರ್ಮಾಧಿಕಾರಿಗಳು, ಅವರದೇ ಅಂತ್ಯ ತೀರ್ಮಾನ ಎಂಬುವುದು.

“ಅದಕ್ಕೆ ಸಾರ್ ತಾವು ಹೇಳಬೇಕು! ಈಗ ಏನು ಮಾಡಬೇಕೂಂತ”

“ಅಜಮಿಾಲನ್ ಅಂಗಡೀಲಿ ನಾನು ಇನ್ನೊಂದು ಸಾರಿ ಪುಕಟ್ಟೆ ಪ್ಯಾಕ್ ಮಾಡಿಸ್ತೀನಿ ಈಗ ತೆಗಿ ಪೆಟ್ಟಿಗೇನ” ಎಂದರು ಅ|| ಪ್ರೊಫೆಸರು.

ಪೆಟ್ಟಿಗೆ ಒಡೆದರೆ, ಒಂದು ಖಂಡಿಯಷ್ಟು ಭತ್ತದ ಹುಲ್ಲು ತುಂಬಿತ್ತು ಅದನ್ನೆಲ್ಲಾ ಹೊರಗೆ ತೆಗೀತಾ ತೆಗೀತಾ ಇದ್ದಾಗ ಅಕ್ಷಯ– ದ್ರೌಪದಿ–ಭಾರತ ಹೀಗೆ ನೆನಪು ಮೆಲಕಾಡಿತು. ಕಡೇಗೆ ೮ ಅಂಗುಲ ಮೂರಂಗುಲ, ಮೂರಂಗುಲದ ಇನ್ನೊಂದು ಕಾಗದದ ಪೆಟ್ಟಿಗೆ ಹೊರಬಂತು.

ಮೆಲ್ಲಗದನ್ನೆತ್ತಿದ ಸೀನಿಯರ್ ಶಂಭು.

ಏನು ಕೆಂಪಿನ ಛಾಯೆ! ಎಂತ ಹೊಸ ಕಾಯ.

ಮೇಜಿನ ಮೇಲ್ಗಡೆ ಅದನ್ನು ಮೆಲ್ಲಗಿಟ್ಟ. ಅದರ ಕುಲಾವಿ ತೆಗೆದ. ಅಂಚ ನ್ನೆತ್ತಿ ಪಕ್ಕಕ್ಕೆ ವಾಲಿಸಿದ. ನಂತರ ಅದರೊಳಗಿನಿಂದ ಥಳಥಳಿಸುವ ಗಡಿಯಾರ ವೊಂದನ್ನು ಬೆರಳು ಗಾಳ ಹಾಕಿ ಹೊರಕ್ಕೆ ತಂದು, ಅದರ ಮುಖ ಒರೆಸಿ ಮೇಜಿನ ಮೇಲಿಟ್ಟ.

ವಿಚಿತ್ರ ಗಡಿಯಾರ. ಮೇಲರ್ಧದಲ್ಲಿ ರೇಡಿಯೋ ಇದ್ದ ಹಾಗೆ. ಕೆಳಗರ್ಧ ಗಡಿಯಾರ. ನಾಲ್ಕೇ ಅಂಕಿಗಳು ೧೨-೩- -೯. ಮಿಕ್ಕ ಗಂಟೆ ತೋರಿಸೋ ಹಾಗೇ ಇಲ್ಲ—ಎರಡು ಅಡ್ಡಾದಿಡ್ಡಿ ಕೈಗಳು.

ಪರವಾಗಿಲ್ಲ ಮದುವೆ ಉಡುಗೊರೆಗೆ ಅಂತ ಅ|| ಪ್ರೊಫೇಸರೂ ಅಂದು ಕೊಂಡರು. ಯಾಕೆ ಇದನ್ನು ಎಲ್ಲರೂ ಬೇಡ ಅಂತಾರೆ ಎಂದೂ ಯೋಚಿಸಿದರು

"ಅಲಾರಂ ಹೊಡಿಸಪ್ಪಾ" ಎಂದರು ಎಲ್ಲರೂ ಸೀನಿಯರ್ ಶಂಭುವನ್ನು ಸಂಕೋಚದಿಂದ, ಪಾಪಾಸುದ್ದ ಮುಖವನ್ನು ಗೇಣುದ್ದ ಮಾಡಿಕೊಂಡು ಸೀನಿಯರ್ ಶಂಭು ಅಲಾರಂ ಇಟ್ಟು, ಕೀಲಿಕೊಟ್ಟು ದೈನ್ಯನಾಗಿ ನಿಂತುಕೊಂಡ.

ಅಲಾರಂ ಹೊಡೆಯುವ ಹೊತ್ತಿಗೆ ಸರಿಯಾಗಿ ಒಂದು ಗಂಟೆ ಬಾರಿಸಿತು. ನಂತರ ಮಧುರ ವಾಣಿಯಲ್ಲಿ

"ನೀವೇಕೋ—ನಿಮ್ಮ ಹಂಗೇಕೋ!"

ಅಂತ ಮೂರು ಸಾರಿ ಪಲುಕಿ ತಣ್ಣಗಾಯ್ತು ಅಲಾರಂ. ಅ|| ಪ್ರೊಫೆಸರು ಮಂದಸ್ಮಿತ ರಾದರು. ಸೀನಿಯರ್ ಶಂಭುವನ್ನು ನೋಡಿದರು, ಅವನೂ ಮಂದಸ್ಮಿತನಾದ.

"ಏನೋ ಶಂಭು, ಅಲಾರಂ ಪಂಚ್ನ ನೀನು ಕೇಳಲಿಲ್ಲವೇ" ಎಂದರು.

"ಕೇಳಿದೆ ಸಾರ್—ಇದರಲ್ಲೇನು ಸಾರ್ ತಪ್ಪು" ಅಂದ ಸೀನಿಯರ್ ಶಂಭು. ಸೀನಿಯರ್ ಶಂಭುವಿನ, ಜೂನಿಯರ್ ಹೆಂಡತಿ ಕೂಡ ಬಂಜೆ.

ಆಗ ಅ|| ಪ್ರೊಫೆಸರು ಉದಾತ್ತತೆಯಿಂದ ತಮ್ಮ ಹಣದ ಚೀಲವನ್ನು ತೆಗೆದರು. ಅದರಿಂದ ಮೂವತ್ತು ರೂಪಾಯನ್ನು ತೆಗೆದಿಟ್ಟರು. ಅಲಾರಂ ಗಡಿಯಾರವನ್ನು ತಾವು ತೆಗೆದುಕೊಂಡರು.

"ಎಲ್ಲರೂ ಮಾಡೋ ಹಾಗೆ ಒಂದು ಬೆಳ್ಳಿ ತಟ್ಟೇನ ಮದುವೆ ಉಡುಗೊರೆ ಅಂತ ಕೊಡಿ. ಈ ಅಲಾರಂ ಗಡಿಯಾರಾನ ನಾನು ತೆಗೆದುಕೊಂಡು ಹೋಗ್ತೇನೆ" ಎಂದರು.

ಅ|| ಪ್ರೊಫೆಸರು ಮನೆಗೆ ಸಂಜೆ ಹೋದಾಗ ಆರು ಜನ ಮಕ್ಕಳೂ ಗಡಿಯಾರಾನ ನೋಡಿದ್ದೂ ನೋಡಿದ್ದೇ! ತಿರುಗಿಸಿ ತಿರುಗಿಸಿ ಕೇಳಿದ್ದೂ ಕೇಳಿದ್ದೇ! ಹೆಂಡತಿ ಕೂಡ, ನನ್ನ ಮನಸ್ಸಿನಲ್ಲಿರೋದನ್ನೇ ಹೇಗೆ ತಿಳಿದುಕೊಂಡ್ರಿ ಅಂದ್ರೆ, ಎಂದು ಲಾವಣ್ಯಮಯಿಯಾಗಿ ಕೇಳಿದಳು.

"ನಿಮ್ಮ ಮನಸ್ಸಿನಲ್ಲಿರೋದೇ! ನನ್ನ ಮನಸ್ಸಿನಲ್ಲಿ ಕೂಡ" ಅಂತ ಮುಗುಮ್ಮಾಗಿ ಅ|| ಪ್ರೊಫೆಸರು ಅಂದರು.

—ಪ್ರಸಾದ್.

---

# ಈ ಪರಿಯ ಸೊಬಗು!

ಈ ಪರಿಯ ಘಾಟಿತನ ಆವನೊಳು ನಾ ಕಾಣೆ
L. I. C. ಪ್ರಿಯ ಮುಂಧ್ರಾನೊಳಲ್ಲದೆ || ಪ ||

ದೊರೆಯತನದಲಿ ನೋಡೆ ನೂರು ಕಂಪ್ನಿಗೆ ಒಡೆಯ
ಸಿರಿಯತನದಲಿ ನೋಡೆ ಕೋಟಿ ಕೋಟಿ
ಹಿರಿಯತನದಲಿ ನೋಡೆ ಹುಟ್ಟುವಾಗಲೆ ನೂರು
ಗುರುವತನದಲಿ ನೋಡೆ ಖದಿಮರಿಗೆ ಗುರುವು.

ಪಾವನತ್ವದಿ ನೋಡೆ ಮಂತ್ರಿಯನೆ ತೊಳೆದವನು
ದೇವತ್ವದಲಿ ನೋಡೆ ಶಕುನಿ ದೇವ
ಲಾವಣ್ಯದಲಿ ನೋಡೆ ಹುಚ್ಚು ಹಿಡಿಸುವನಯ್ಯ
ಆವ ಧೈರ್ಯದಿ ನೋಡೆ ಬಲು ರುಸ್ತುಮ.

ಗಗನದಲಿ ಸಂಚಾರ ಮಂತ್ರಿಗಳ ದೋಸ್ತು
ಸರಕಾರ ಸೆಕ್ರೆಟರಿ ಎಲ್ಲ ತನ್ನವರೆಂಬ
ನಾಡ ಮನೆಮಾತಾದ ಮುಂಧ್ರಾನಿಗಲ್ಲದೆ
ಮಿಕ್ಕೆಲ್ಲ ಆಡ್ಮಿಗಳಿಗೀಭಾಗ್ಯವುಂಟೆ!

—ರಾಮಿ.

# ಏಕೆ ಆತುರ?

(ನಾಳೆಯಾಗಲಿ, ನಾಳೆ ಮಾಡುವ
ಇಂದೆ ಏತಕೆ ಆತುರ?)
ಸತ್ಯಂ ವದ, ಧರ್ಮಂಚರ,
ಮಾತಾಪಿತರೂ ದೇವೋ ಭವ!
ಲಂಚಂತ್ಯಜ, ಪಕ್ಷಂತ್ಯಜ,
ಬಾಂಡುಂಗ್ ಪಂಚ ಶೀಲಂಚರ!

(ನಾಳೆಯಾಗಲಿ ನಾಳೆ ಮಾಡುವ
ಇಂದೆ ಏತಕೆ ಆತುರ?)
ಜಾತಿ ಹೆಸರನೆ ಹೇಳಕೂಡದು
ಇಂಡ್ಯರೆಲ್ಲರೂ ಅಣ್ಣತಮ್ಮರು
ಪ್ರಾಂತ ಪ್ರಾಂತದ ದ್ವೇಷವ
ದೂಡಬೇಕು ನಾವೆಲ್ಲರೂ!

(ನಾಳೆಯಾಗಲಿ ನಾಳೆ ಮಾಡುವ
ಇಂದೆ ಏತಕೆ ಆತುರ?)
ಪರರ ಸ್ವತ್ತಿಗೆ ಬಾಯಬಿಡದೆ
ತನ್ನ ಬೆವರನೆ ಸುರಿಸಿ ಹಣವನು
ಗಳಿಸಿ ಅದನೇ ಉಳಿಸಿ ಪ್ಲಾನಿಗೆ
ಸಾಲವಾಗಿಯೆ ನೀಡಬೇಕು!

(ನಾಳೆಯಾಗಲಿ, ನಾಳೆ ಮಾಡುವ
ಇಂದೆ ಏತಕೆ ಆತುರ?)
ನೂರು ಜನರಾ ಹಣವ ಕೂಡಿಸಿ
ಕಂಪ್ನಿಯೊಂದನು ಸ್ಥಾಪಿಸಿ
ಕೆಲಸಕಾಗಿ ಬರುವ ಜನರಿಗೆ
ತುಂಬು ಸಂಬಳ ಸುರಿಯಬೇಕು!

(ನಾಳೆಯಾಗಲಿ! ನಾಳೆ ಮಾಡುವ!
ಇಂದೆ ಏತಕೆ ಆತುರ?)

—ಪಾಟೀಲ.

# ಕಾಮದಹನ

"ಆ?....ಏನಂದ್ರೀ?....ಕಾಮಣ್ಣನೇ?....ಎಲ್ಲೀಂತೀರಾ?....ಹ ಹ ಹ ಹ! ....ಆಗೋಯ್ತಲ್ಲ ಕಾಮದಹನ ಅವತ್ತೆ!"

"ಹಾಗಂದ್ರೇನ್ರೀ? ...ಕಾಮದಹನ....!"

"ಹುಂ! ಕಾಮದಹನವೇ! ...ಕಾಮಣ್ಣನ ಕಾಟದಲ್ಲಿ ಬೀದೀ ಹುಡುಗೀರು ನಿಜಕ್ಕೂ ಬದುಕುವುದೇ ಕಷ್ಟವಾಗಿತ್ತು. "ಬೇಡವೋ ಕಾಮೂ, ಕಾಲೇಜು ಹುಡುಗೀರ ಕಾಲ, ಹಿಂದೆ ಕಾಲು ಹಾಕಬೇಡವೋ; ನನ್ನಾಣೆ, ಮಾನವಾಗಿ ಬದುಕೋ ಮಗೂ!" ಅಂತ ಹೇಳುತ್ತಲೇ ಇದ್ದರು ಅವರಮ್ಮ ಕಪಿಲಮ್ಮ ಕಾಪೀ ಕಾಸಿ ಅವನಿಗೆ ಹುಯ್ಯುವಾಗಲೆಲ್ಲ. "ನಿನ್ನಾಣೆಗೂ ಹಾಗೇ ಮಾಡ್ತೀನಮ್ಮ ಇನ್ನು ಮೇಲೆ" ಅಂತ ಹಲ್ಲುಕಿರಿದ ಕಾಮಣ್ಣ ಕಪಿಲಮ್ಮನ ಸೊಂಟದಿಂದಲೇ ಎಂಟಾಣೆ ಕಸಿದು ಕಂಬಿಕೀಳುತ್ತಿದ್ದ ಹೋಟಲಿಗೆ!

"ಹ ಹ ಹ! ಚೆನ್ನಾಗಿದೆ ಕೇಳುಕ್ಕೆ!"

"ಕಾಮನ ಬಿಲ್ಲಿನ ಏಳು ಬಣ್ಣದ್ದೂ—ಪ್ರಾಣಿ, ಪಕ್ಷಿ, ಮೃಗ, ಮನುಷ್ಯ—ಎಲ್ಲ ಇರೋ ಬುಷ್ ಕೋಟ್, ಬೂದು ಬಣ್ಣದ ಬೂಟ್ಸು, ಕೆಂಪು ಕೈಚೌಕ, ಕಪ್ಪು ಕನ್ನಡಕ, ಕೆಂಜು ಕೂದಲಿನ ಕ್ರಾಪು, ಇಷ್ಟೂ ಒಟ್ಟಾಗಿರೋ ಕಾಮಣ್ಣ, ನಿಜಕ್ಕೂ ಹೆಸರಿಗೆ ತಕ್ಕ ಹಾಗೆ ಕಾಮಣ್ಣನೇ ಆಗಿದ್ದ!....ಈಗ ಹದಿನೈದು ದಿನದಿಂದ ಅವನು ಹಿಂಬಾಲಿಸುತ್ತಿದ್ದದ್ದು, ಹರಳು ಲೋಲಕು, ಹೈ ಹೀಲ್ಡು ಷೂಸು, ಫಳಫಳ ಹೊಳೆಯುವೋ ಹಳದೀ ದಿಂಡಿಗಲ್ ಸೀರೆ ಉಟ್ಟು, ಹನ್ನೆರಡೂವರೆಗೆ ಸರಿಯಾಗಿ ಹೊರ ಬೀಳುತ್ತಿದ್ದ ಹುಡುಗೀನ! (ಆಕೆ ಹೋಗುತ್ತಿದ್ದುದು ಹಿಂದೀ ಕ್ಲಾಸಿಗೆ ಅಂತ ಹಿಂದಿನಿಂದ ತಿಳಿಯಿತು.)

"ಹಾಗೇನು?....ಹೇಗೆ ಸಾಗಿತು ಹಾಗಾದರೆ ಅವನ ಪ್ರಯತ್ನ?"

"ಕೇಳಿ, ಹೇಳ್ತೀನಿ, ಕಡೆಗೊಂದು ದಿನ ಕಾಮಣ್ಣ ಇನ್ನೊಂದು ಹೆಜ್ಜೆ ಮುಂದಿಟ್ಟು—ಪಾರಿವಾಳ ಸಂದೇಶ ಕಳಿಸಿದ!"

"ಹ ಹ ಹ ಹ! ಏನ್ರೀ ನೀವು ಹೇಳೋದು?....ಇದು, ಕಲಿಯುಗ ಕಣ್ರೀ—ಪಾರಿವಾಳ ಸಂದೇಶ, ಹಂಸ ಸಂದೇಶ, ಕಳಿಸಕ್ಕೆ!"

"ಅದೇ ಮತ್ತೆ! ಕಲಿಯುಗ ಆಗೋ ಹೊತ್ತಿಗೇ ಪಾರಿವಾಳದ ಬದಲು ಕಪೋತದ ಕೈಲಿ ಕಾಗದ ಕೊಟ್ಟು ಕಳಿಸಿದ್ದು!....ಆ ಪಕ್ಕದ ಮನೆ ಹುಡುಗ, ಕಾಗದ ತಲಪಿಸಿದೋನು—ಅವನಿಗೆ ಒಂದು ಕಣ್ಣು ಗಾಜಿನದು—ಅಂದರೆ ಒಕ್ಕಣ್ಣ ಕಪೋತಿ ಅವನು!"

"ಹ ಹ ಹ ಹ! ಚೆನ್ನಾಗಿದೆ ಕಪೋತ ಸಂದೇಶ!....ಆ ಮೇಲೆ?"

"ಆ ಮೇಲೆ, ಉತ್ತರ ಬಂತು. ಇಂಥಾ ಸ್ಥಳದಲ್ಲಿ, ಇಂಥಾ ಹೊತ್ತಿಗೆ, ಭೇಟಿ ಅಂತ."

"ಸರಿ,....ಆ ಮೇಲೇನಾಯ್ತು?"

"ಆದದ್ದೇನು?....ಆಗಲೇ ಹೇಳಿದೆನಲ್ಲ, ಕಾಮದಹನಾಂತ!"

"ಕಾಮದಹನಾ .. ?"

"ಹುಂ! ಮುಕ್ಕಣ್ಣ—ಅದೇ ಆ ಹಿಂದೀ ಹುಡುಗೀ ಪಾರ್ವತೀ ಗಂಡ—ತಪೋಭಂಗನಾದ ಆ ದಿನದ ಮಟ್ಟಿಗೆ!....ಪಾಪ, ಅವನು ಹಸಿವೆ ಬಾಯಾರಿಕೆಗಳ ಪರಿವೆ ಇಲ್ಲದೆ, ದಿನಕ್ಕೆ ಇಪ್ಪತ್ತು ಘಂಟೆ ಕಾಲ ತಪಸ್ಸು ಮಾಡುತ್ತಿದ್ದ—ಇಸ್ಪೀಟಾಡುತ್ತ! (ಅದಕ್ಕೇನಂತೆ ಅವಳು ಹಿಂದೀ ಹಿಡಿದದ್ದು ಹೊತ್ತುಹೋಗುಕ್ಕೆ) ...ಸರಿ,. ಮುಕ್ಕಣ್ಣ, ಅವನ ಗೆಳೆಯರು, ಬಿಗಿದರು ಬಲವಾಗಿ ಕಾಮಣ್ಣನಿಗೆ! ಅವನು 'ಶಿವ ಶಿವಾ'ಂತ ಉರುಳಾಡುತ್ತಿರುವಾಗ, ಮುಕ್ಕಣ್ಣ ಸಿಗರೇಟಿಗಾಗಿ ಗೀಚಿದ ಕಡ್ಡಿಯು ಮಗ್ಗುಲಿಗೇ ಬಿದ್ದ! ಬಣ್ಣದ ಬುಷ್‌ಕೋಟು, ಬೆನ್ನವರೆಗೂ ಸುಟ್ಟ ಮೇಲೇ ಕಾವೇರಿ ಕಾಮಣ್ಣ ಕಿರುಚಿದ್ದು!"

"ಅಯ್ಯೋ ಪಾಪ!....ಆ ಮೇಲೆ?"

"ಆ ಮೇಲೆ, ಅಲ್ಲೇ ಹೋಗುತ್ತಿದ್ದ ಲಾರಿಗೆ ಹೇರಿ, ಆಸ್ಪತ್ರೆಗೆ ಸಾಗಿಸಿದರು. ಈಗ ಕಾಮನಹಬ್ಬ, ಪಾಂಗಿತವಾಗಿ ಆಚರಿಸುತ್ತಾ ಇದಾನೆ, ಕಾಡ್ಲಿವರ್ ಆಯಿಲ್ ಒಳಿಸಿಕೊಂಡು ಬಿದ್ದಿರುವ ಕಾಮಣ್ಣ—'ಲಬೋ ಲಬೋ' ಮಾಡುತ್ತ!"

—ಸುನಂದಮ್ಮ.

---

# ನಿದ್ರಾ ಶಾಸ್ತ್ರ

ನಿದ್ದೆ ಮಾಡುವುದಕ್ಕಾಗಿ ಮಲಗುವಾಗ, "ಬುದ್ಕೊ" ಎಂದು ತನ್ನ ಕಳೇಬರಕ್ಕೆ ಆಜ್ಞೆ ಈಯುವ ಕನ್ನಡಿಗರಿದಾರೆ, ಕರ್ನಾಟಕದಲ್ಲಿ.

ಹಾಗನ್ನುವಾಗ, ಆ ಕಳೇಬರ ಹೇಗೆ ಬಿದ್ದು ನಿದ್ದೆ ಮಾಡುತ್ತದೆ, ಅದರ ಆಗಿನ ಪರಿಸ್ಥಿತಿ ಎಂಥದ್ದು, ಆ ಪರಿಸ್ಥಿತಿಯನ್ನು ಪರೀಕ್ಷಿಸಿ, ಆಡ್ಲರ್ ಮುಂತಾದ ಸುವಿಖ್ಯಾತ ಮನಶ್ಶಾಸ್ತ್ರಜ್ಞರು ಆ ದೇಹದೊಡೆಯನ ಮನೋಬುದ್ಧಿ ಅಹಂಕಾರಗಳನ್ನು ಕುರಿತು ಏನೇನು ಊಹಿಸಿ ನಿರ್ಧರಿಸುವರು—ಎಂಬುದನ್ನ ಆ ಕನ್ನಡಿಗರು ಗಮನಿಸಿದಂತಿಲ್ಲ.

ಇರಲಿ! ಆಡ್ಲರ್ ಪ್ರಭೃತಿಗಳು ಏನು ಹೇಳುತ್ತಾರೆ, ಅದನ್ನಾದರೂ ಕೇಳುವ.

ಅವರನ್ನುತ್ತಾರೆ,—ಜಾಗ್ರದವಸ್ಥೆಯಲ್ಲಿ ಒಬ್ಬ ಮನುಷ್ಯ ನಿಲ್ಲುವ, ನಡೆಯುವ, ಕೂರುವ, ಏಳುವ, ಒರಗುವ, ತಿರುಗುವ, ಠೀವಿ ಠೇಂಕಾರಗಳಿಂದ ನಾವು ಅವನ ಸ್ವಭಾವವನ್ನು ಕುರಿತು ಹೇಗೆ ಊಹಿಸಿ ನಿರ್ಧರಿಸಬಹುದೋ... (ಉದಾಹರಣೆಗೆ: ಜೊತೆಯವನ ಭುಜಕ್ಕೆ ನೇತಾಡುತ್ತ ಹೋಗುವ ಕಾಲೇಜು ವಿದ್ಯಾರ್ಥಿ, ಪರೀಕ್ಷೆಯಲ್ಲಿ ಕಾಪಿ ಹೊಡೆದೇ ಪಾಸುಮಾಡಬೇಕಾಗುತ್ತದೆ, ಅಲ್ಲವೆ?)— ಹಾಗೆಯೇ, ನಿದ್ದೆ ಮಾಡುವಾಗ, ಒಬ್ಬ ಹೇಗೆ ತನ್ನ ಕೈಕಾಲುಗಳನ್ನು ಚಾಚಿದಾನೆ, ಅಂಗಾತ ಮಲಗಿದಾನೆಯೆ, ಎಂಬುದನ್ನೆಲ್ಲ ಗಮನಿಸಿದರೆ, ಆತನ ಗುಣದೋಷಗಳ ಸಂಪೂರ್ಣ ವಿವರಣೆಯನ್ನು ನುರಿತ ಮನಶ್ಶಾಸ್ತ್ರಜ್ಞ, ಆ ಚಿಹ್ನೆಗಳಿಂದಲೇ ಮಾಡಬಲ್ಲ!

1) ಅಂಗಾತ, ನೆಟ್ಟಗೆ, ಕೈಗಳೆರಡನ್ನೂ ಡ್ರಿಲ್ಲಿನಲ್ಲಿ ಮೈಗೆ ಅಂಟಿಸುವಂತೆ, ಮಲಗಿದಾನೆ ಎನ್ನಿ!—ಒಬ್ಬ ವ್ಯಕ್ತಿ. ಆತನ ಗುಣ ಎಂಥದ್ದು ಹೇಳಲಿ?... ಸ್ವಪ್ರತಿಷ್ಠೆ, ದುರಹಂಕಾರ, ತಾನುಂಟೋ ಮೂರು ಲೋಕವುಂಟೋ, ನನ್ನ ಸಾಟಿ ಯಾರೂ ಇಲ್ಲ, ಎಂಬ ಬುದ್ಬುದಗಳೆದ್ದು ಚತುರ್ಭುಜ ಬೆಳೆಸುವ ಪುಣ್ಯಾತ್ಮ ಆತ.

2) ಮಂಡಿಗಳೆರಡನ್ನೂ ಗಲ್ಲದ ತನಕ ಎಳೆದು, ಕೈಗಳೆರಡನ್ನೂ ಕಾಲು ಸಂದಿನಲ್ಲಿ ತುರುಕಿ ಮಲಗಿರುತ್ತಾನೆ, ಮತ್ತೊಬ್ಬ!.... ಆತನ ಗುಣ? ಗೊತ್ತೇ ಇದೆ.... ಹೇಡಿ, ನಿರುತ್ಸಾಹಿ, ಶೋಂಭೇರಿ, ತಲೆಮರೆಸಿ ತಿರುಗುವವ, ಎಲೆಮರೆಕಾಯಿ, ವನಸುಮ, ಅಬ್ಬೇಪ್ಯಾರಿ ಇತ್ಯಾದಿ.

3) ಬೋರಲು ಮಲಗಿದಾನೆ ಅನ್ನಿ!....ಮಾನಸಿಕ ಗುಣ ಅವನದು ಎಂತದ್ದು ಅಂತೀರೋ? ಹಟವಾದಿ, ತಾನು ಹಿಡಿದದ್ದೇ ಪಟ್ಟು, ಜಗ್ಗದೆಯೆ ಬಿದ್ದಲ್ಲೆ ಬಿದ್ದಿರುವ ಪ್ರಾಣಿ ಸನಾತನಿ, ಪ್ರಾಚೀನ ಪದ್ಧತಿ ಪ್ರಿಯ....ಆತ! ಸಂದೇಹವೇ ಇಲ್ಲ.

4) ತನ್ನ ಕೈಯ್ಯನ್ನೇ ತಲೆಗೆಳಗಿರಿಸಿಕೊಂಡು ನಿದ್ರಿಸುತ್ತಿದಾನೆಯೆ?.... ಗೊತ್ತೇ ಇದೆ, ಸ್ವಾವಲಂಬಿ! ಕರ ಕೊಡುವುದಕ್ಕೆ ಹಿಂಜರಿಯುವ ನಾಗರಿಕ. ಇತರರ ಮೇಲಿನ ಅಪನಂಬಿಕೆಯಿಂದ ಪೀಡಿತ.

5) ಬಾಯಿ ಅಗಲಿಸಿಕೊಂಡು ನಿದ್ರಿಸುತ್ತಾನೆಯೆ? ಭಾಷಣಪ್ರಿಯ, ಮಂತ್ರಿ ಪದವಿಗೆ ಲಾಯಕ್ಕಾದವನು ಅಥವಾ ಅಂಥವರೆದುರು ಬಾಯಿಬಿಟ್ಟುಕೊಂಡು ಕೂರುವಂಥ ಸ್ವಭಾವ, ಕಡಬು ಬೀಳಬಹುದೆಂಬ ಆಸೆಯಿಂದ.

6) ಗೊರಕೆ ಎಳೆದು ನಿದ್ದೆಮಾಡುವ ನೀಚನೇನು? ಗೊತ್ತೆ ಇದೆ! ಹಿಂಸಾ ತತ್ವಾವಲಂಬಿ! ನಾಲ್ಕು ಜನರ ನಡುವೆ ಬಾಳಲು ಯೋಗ್ಯತೆ ಇಲ್ಲದವನು. ಇತರರ ಬದುಕಿನಲ್ಲಿ ಹುಳಿ ಹಿಂಡುವುದೇ ಪರಮ ಸೇವೆ ಎಂದು ಅಂತರೀಕವಾಗಿ ನಂಬಿರುವ ವನ್ಯಪಶು.

7) ಆಗಾಗ ಅತ್ತಿತ್ತ ಹೊರಳುತ್ತ ನಿದ್ದೆಮಾಡುವ ಮನುಷ್ಯ? ಅವನದು ಚುನಾವಣೆಗಳಲ್ಲಿ 'ಸ್ವತಂತ್ರ' ಉಮೇದುವಾರನಾಗಿ ನಿಂತು, ಅಡ್ಡಗೋಡೆಯ ಮೇಲಿನ ಬೆಕ್ಕಿನಂತೆ ಹಾಲು ಮಡಕೆ ಎತ್ತಕಡೆ ಕಾಣಿಸುತ್ತದೋ ಅತ್ತಕಡೆ ಹಾರಿ ಅದನ್ನು ನೆಕ್ಕಿ, ಮತ್ತೆ ಅಡ್ಡಗೋಡೆಯ ಮೇಲೆ ಕೂರುವ ಸ್ವಭಾವ ಖಂಡಿತ.

8) ನಿದ್ರೆಗೆ ಅಂತ ಮಲಗಿ, ನಿದ್ರೆಮಾಡದೆ ಕಣ್ಣು ಕಣ್ಣು ಬಿಟ್ಟುಕೊಂಡು, ಕಿವಿ ತೆರೆದು, ಮಲಗಿರುವ ಆಸಾಮಿಯೇನು ಆತ? ಹಾಗಾದರೆ, ಅವನ ಸ್ವಭಾವ ಎಂಥದ್ದು ಅಂತೀರೋ? ಆತ ಒಬ್ಬ ಸಂಶಯ ಪಿಶಾಚಿ, ಅನುಮಾನವೇ ಇಲ್ಲ. ಮನಶ್ಶಾಸ್ತ್ರಿಗಳು ಅದನ್ನೇ ಹೇಳುವರು! ತಾನು ಕಣ್ಣುಮುಚ್ಚಿದರೆ, ಇತರರು ಏನು ಮಾಡುವರೋ ಎಂಬ ಭಯ, ಸಂದೇಹ. ಅಂಥ ಸಂಶಯ ಒಳಮನದಲ್ಲಿ ಕುದಿಯುತ್ತಿರುವುದರಿಂದಲೇ ಪಾಪ, ಇಂಥವರಿಗೆ ನಿದ್ರೆ ಬರದೆ ಇರುವುದಂತೆ.

—ಪಾಟೀಲ.

---

# ಪ್ರಾಣೇಶ ಪ್ರಸಂಗ

## (ಮೇಷ್ಟರ ಮೂರನೆಯ ಸಮಸ್ಯೆ)

---

ರೇಗುವಯ್ಯನವರ ಅನ್ನ ಸತ್ಯಾಗ್ರಹ ಪ್ರಕರಣದಿಂದ ಬುದ್ಧಿ ಕಲಿತಿದ್ದರಿಂದಲೋ ಅಥವಾ ಮಗುವಿನ ಅಪ್ಪನಾದ ಮೇಲಾದರೂ ಹುಡುಗಾಟಿಕೆ ಬಿಡಬೇಕೆಂಬ ಕಾರಣ ದಿಂದಲೋ, ಪ್ರಾಣೇಶ ನವದುಂದುಭಿಯನ್ನು ಕೊಂಚ 'ಸೀರಿಯಸ್ಸಾಗಿ' ಮಾಡ ಬೇಕೆಂದು ನಿಶ್ಚಯಿಸಿದ್ದಾನೆ. ಹಾಗೆ 'ಸೀರಿಯಸ್' ಮಾಡಲು ೧೦೮ ಶ್ರೀ ಶ್ರೀಗಳೊಬ್ಬರು ಪ್ರತಿನಿತ್ಯ ಕೊಡುತ್ತಿರುವ ಉಪನ್ಯಾಸಮಾಲೆಯನ್ನು ಅಚ್ಚುಮಾಡ ಬಹುದಲ್ಲ ಎಂಬ ಸಲಹೆ ಬಂತು. ಬಂತು ಏನು, ನಾನೇ ಆ ಸಲಹೆ ಕೊಟ್ಟೆ. ಆದರೆ ಪ್ರಾಣೇಶ "ಛೆ, ಛೆ ಆದಾಗದು, ಹಾಗೆ ತೀರ ಸೀರಿಯಸ್ ಆದರೆ ಒಂದು ದಿನ ಗೋತಾ ಹೊಡೆದೀತು ಪೇಪರು" ಎಂದು ಕೂಗಿದ.

ಆಗ ಒಳಗಿನಿಂದ ಎಚ್ಚರಿಕೆ ಬಂತು "ಮಗು ಏಳುತ್ತೆ, ಕೂಗಬೇಡಿ" ಅಂತ. ಮನೆಯ ಯಜಮಾನ ತಾನಲ್ಲ ಎಂದು ಅರಿವಾಯಿತು ಪ್ರಾಣಿಗೆ. ಆದರೂ "ಎದ್ದರೆ ಏಳಲಿ ಬಿಡು. ನಮ್ಮ ಚಂದ್ರಮುಠಿ ಬದುಕಬೇಕಾದ್ದು ಸದ್ದಿಲ್ಲದ ಜಗತ್ತಿನಲ್ಲಲ್ಲ. ಕೊಂಚ ಸದ್ದು ಗದ್ದಲ ಅಭ್ಯಾಸವಾದರೇನೇ ಚೆನ್ನು, ಈಗಿನಿಂದ" ಎಂದು ತನ್ನ ಪಾಂಡಿತ್ಯ ಪ್ರದರ್ಶಿಸಿದ. "ಸರಿ ಬಿಡಿ. ನನ್ನದೇನಡ್ಡಿಯಿಲ್ಲ. ಆದರೆ ಮಗು ಎಚ್ಚ ಗೊಂಡ ಕೂಡಲೆ 'ಮಗು ಎದ್ದಿದೆ ನೋಡು' ಎಂದು ಮಾತ್ರ ಕೂಗಬೇಡಿ" ಎಂದು ಹೆಂಡತಿ ಒಳಗೆ ಹೋದಳು. ನಾವು ಚಂದ್ರಮುಠಿಗೆ ತಲೆಬಾಗಿ ದನಿ ತಗ್ಗಿಸಬೇಕಾಯಿತು.

"ಇವತ್ತು ಭಾನುವಾರ ನೋಡು. ನೀನೊಂದು ಕೆಲಸ ಮಾಡಬೇಕು"— ಎಂದ ಪ್ರಾಣೇಶ.

ಚರ್ಚಿಗೆ ಹೋಗಿಬರಬೇಕೆ ?" ಎಂದು ಕೇಳಿದೆ. "ಥತ್ ನಿನ್ನ! ಮೊನ್ನೆ ತಾನೆ ರಿಟೈರಾದರಲ್ಲ, ಆ ಮೇಷ್ಟರು ನಾರಾಯಣ ಮೂರ್ತಿಗಳು, ಅವರನ್ನು ಕೊಂಚ ಕಂಡುಬರಬೇಕು."

"ಹುಚ್ಚು ಹಿಡಿದವರಿಗೆ ಮದ್ದುಕೊಡುತ್ತಾರಲ್ಲ ಅವರೆ ?"

"ಹೌದು ಅವರೇ. ಹುಚ್ಚರಿಗೆ ಮದ್ದು ಮಾತ್ರವಲ್ಲ, ಶಿಕ್ಷಣ ಕ್ಷೇತ್ರದಲ್ಲಿರುವ ಎಷ್ಟೋ ಹುಚ್ಚುಗಳಿಗೆ ಅವರೊಡನೆ ಮದ್ದಿದೆ. 35 ವರ್ಷಕಾಲ ಶಿಕ್ಷಕನಾಗಿ

ಪ್ರಾಮಾಣಿಕತೆಯಿಂದ ದುಡಿದಿದ್ದಾರೆ. ಅಂಥವರ ಅಭಿಪ್ರಾಯ ಸಂಗ್ರಹಿಸಿ ಪ್ರಕಟಿಸೋಣ. ಅವುಗಳಿಗೆ ಬೆಲೆ ಬರುತ್ತೋ ನೋಡೋಣ ಅವರನ್ನೊಮ್ಮೆ ಭೇಟಿ ಮಾಡಿಬಾ. ಇವತ್ತು ನಿನ್ನ ಕಳುಹಿಸುತ್ತೇನಂತ ಆಗಲೇ ಅವರಿಗೆ ತಿಳಿಸಿದ್ದೇನೆ." ನೆಗಡಿಯಾಗಿತ್ತಾದ್ದರಿಂದ ಮನೆಯಲ್ಲೇ ತಳವೂರಿಕೊಂಡು ಡಿಕ್ಕನ್ಸನ ಒಂದು ಹಳೇ ಕಾದಂಬರಿ ಮಗುಚುತ್ತಿರೋಣ ಎಂದುಕೊಂಡಿದ್ದೆ. ಅದಕ್ಕೆ ಕಲ್ಲುಬಿತ್ತು. ಸಂಪಾದಕರ ಅಪ್ಪಣೆ! ನಡೆಸದಿರಲುಂಟೆ?

ಸರಿ, ಬೇಕೆಂತಲೇ ಒಂದು ಚುಂಗೆದ್ದ, ತೂತುಬಿದ್ದ ಷರಟೆಳೆದು ಹಾಕಿಕೊಂಡು ಒಂದು ಟವಲೇರಿಸಿ ಹೊರಟೆ.

"ಕೊಂಚ ಲಕ್ಷಣವಾದ ಬಟ್ಟೆಯಿಲ್ಲವೇನಯ್ಯ" ಎಂದು ಆಕ್ಷೇಪಿಸಿದ ಪ್ರಾಣೇಶ.

"ಸರಿ ಸರಿ, ಅಂಥ ಸಿಂಪಲ್ ಮನುಷ್ಯನನ್ನ ಕಾಣೋಕೆ ಭರ್ಜರಿಯಾಗಿ ಡ್ರೆಸ್ ಮಾಡಿಕೊಂಡು ಹೋದರೆ ಬಹಳ ಚೆನ್ನಾಗಿರುತ್ತೆ ಅಲ್ಲವೆ? ಸದ್ಯ ನಾನೇನೂ ಹೆಣ್ಣು ನೋಡೋಕೆ ಹೋಗುತ್ತಿಲ್ಲ, ತಿಳೀತೇನು?" ಎಂದುಬಿಟ್ಟು ಅವನ ಬಾಯಿಮುಚ್ಚಿಸಿ ಹೊರಬಿದ್ದೆ.

ಮೂರ್ತಿಯವರ ಮನೆ ತಲುಪಿದಾಗ ಅಲ್ಲಿ ಏನೋ ವಿಶೇಷವಿದ್ದಂತೆ ಕಂಡಿತು. ನಾಲ್ಕಾರುಮಂದಿ ಹೊರಗಿನವರು ನೆರೆದಿದ್ದಹಾಗಿತ್ತು. ಹೀಗೇ ಬಂದೆ ಎಂದುಬಿಟ್ಟು ಅಲ್ಲಿಂದ ಕಂಬಿ ಕೀಳಬೇಕೆನಿಸಿತು. ಆದರೆ ಅಷ್ಟರಲ್ಲಿ ನಿವೃತ್ತ ಮೇಷ್ಟರು ಬಂದು ಬಹಳ ಆದರದಿಂದ ಬರಮಾಡಿಕೊಂಡರು.

"ಏನೋ ಕೆಲಸದಲ್ಲಿದ್ದಹಾಗಿದೆ. ನಡುವೆ ಬಂದು ತೊಂದರೆ ಕೊಟ್ಟೆನೆ?" ಎಂದು ಹಲ್ಲುಕಿರಿದೆ ಉಪಚಾರಕ್ಕೆ.

"ಇಲ್ಲವಲ್ಲ ನಿಮ್ಮನ್ನೇ ಕಾಯುತ್ತಾ ಇದ್ದೆ. ಪ್ರಾಣೇಶರಾಯರು ನೀವು ಬರುತ್ತೀರಂತ ಮೊದಲೇ ತಿಳಿಸಿದ್ದರು" ಎನ್ನುತ್ತಾ ಅವರು ನನ್ನನ್ನು ಒಂದು ಭವ್ಯವಾದ ಆಸನದಲ್ಲಿ ಕುಳ್ಳಿರಿಸಿ ತಾವು ಅಲ್ಲಿಯೇ ಒಂದು ಕುರ್ಚಿಯಲ್ಲಿ ಕುಳಿತರು. ಅಲ್ಲಿ ನಾನು ಕಂಡ ಉಳಿದ ಮಂದಿಯೆಲ್ಲ ಯಾಕೋ ಆಚೆ ಮಗ್ಗುಲಿನ ಕೋಣೆಯಲ್ಲೇ ಮಾತನಾಡಿಕೊಳ್ಳುತ್ತಿದ್ದರು. ನಾನೊಮ್ಮೆ ಸುತ್ತಲೂ ನೋಡಿದೆ. ಮೇಷ್ಟರ ಮನೆಯ ಓರಣ ಅಚ್ಚುಕಟ್ಟು ಕಂಡು ಬೆರಗಾದೆ. ಅಪರಿಚಿತ ಪೇಪರಿನವನೊಬ್ಬನಿಗೆ ಅವರು ತೋರಿಸಿದ ಆದರ ದೊಡ್ಡದೆನಿಸಿತು.

ಸರಿ. ಹಿಂದಿನ ಸಂಪ್ರದಾಯದಂತೆ ಯೋಗಕ್ಷೇಮ ವಿಚಾರಿಸಿದಾಯಿತು. ಮೇಷ್ಟರು ರಿಟೈರಾದ ಪ್ರಸ್ತಾಪ ಬಂತು. ಅವರ ಸರ್ವೀಸಿನ ಕೆಲವು ಅನುಭವಗಳೂ ಬಂದುವು. ಆದರೆ ನಾನು ಬಂದ ಕೆಲಸ ಪ್ರಾರಂಭವಾಗಬೇಕಲ್ಲ. ಆ ವಿಚಾರ ಪೀಠಿಕೆಯಾಗಿ ಎರಡು ಮಾತು ಹೇಳಿ, "ಮುಖ್ಯವಾಗಿ ನಿಮ್ಮನ್ನು (ಶಿಕ್ಷಕರನ್ನು) ಕಾಡುತ್ತಿರುವ ಸಮಸ್ಯೆಗಳಾವುವು ಎಂದು ವಿವರಿಸುತ್ತೀರಾ?" ಎಂದು ಕೇಳಿದೆ.

"ಅವು ಆರೇ ಆರು" ಎಂದರು ಮೇಷ್ಟ್ರರು.

ಪರವಾಯಿಲ್ಲ! ಮೇಷ್ಟ್ರರು ಭೇಟಿಗೆ ಸಿದ್ಧರಾಗಿಯೇ ಕುಳಿತಂತಿತ್ತು. ಆರು ಸಮಸ್ಯೆಗಳೆಂದು ವಿಂಗಡಿಸಿಕೂಡ ಇಟ್ಟುಬಿಟ್ಟಿದ್ದಾರೆ. ಕೆಲಸ ಸರಾಗವಾಯಿತು ಎಂದು ಕೊಂಡು — "ಆರು ಸಮಸ್ಯೆಗಳ ಕುರಿತು ಕೊಂಚ ಹೇಳುತ್ತೀರಾ?" ಎಂದು ಪ್ರಶ್ನಿಸಿದೆ.

ಮೇಷ್ಟ್ರರು ಒಂದು ಚಿಟಿಕೆ ನಶ್ಯ ಏರಿಸಿ "ಆ ಆರರಲ್ಲಿ ಎರಡಂತೂ ಬಗೆಹರಿದಿವೆ" ಎಂದರು.

ಇದು ನನ್ನ ಪ್ರಶ್ನೆಗೆ ಉತ್ತರವಲ್ಲ. ಆದರೂ ಆಶಾದಾಯಕವಾದ ಹೇಳಿಕೆ. ಆರೂ ಸಮಸ್ಯೆಗಳು ಹಾಗೆಯೇ ಉಳಿದಿಲ್ಲ. ಎರಡಾದರೂ ಬಗೆ ಹರಿದಿವೆ; ಚಿಂತೆ ಯಿಲ್ಲ. "ಬಗೆಹರಿದ ಆ ಸಮಸ್ಯೆಗಳು ಯಾವುವು ಎಂದು ಕೊಂಚ ತಿಳಿಯಬಹುದೆ?" ಎಂದೆ ನುಣ್ಣಗೆ.

ಮೇಷ್ಟ್ರರು ಮೂಗುಜ್ಜಿಕೊಳ್ಳುತ್ತಾ "ಬಗೆಹರಿದ ಸಮಸ್ಯೆಗಳ ವಿಚಾರ ಬಿಡಿ. ಸದ್ಯ ಬಗೆಹರಿಯದ ದೊಡ್ಡಪುಟ್ಟ ಸಮಸ್ಯೆಗಳದೇ ಯೋಚನೆ" ಎಂದರು.

ಘಾಟಿ ಆಸಾಮಿ; ಈತನೊಡನೆ ಏಗೋದು ಕಷ್ಟ ಅನ್ನಿಸಿತು. ಸಮಸ್ಯೆ ಸಮಸ್ಯೆ ಅಂತಾರೆಯೇ ಹೊರತು ಸಮಸ್ಯೆ ಯಾವುದೆಂದು ಬಾಯಿಬಿಡುವುದಿಲ್ಲ. "ಮರಳಿಯತ್ನವ ಮಾಡು" ಎಂದುಕೊಂಡು "ಹೌದು ಹೌದು, ಬಗೆಹರಿಯದ ಸಮಸ್ಯೆ ಗಳೇ ಮುಖ್ಯ ಸದ್ಯ ಅವು ಯಾವುವು ತಿಳಿಸಿ" ಎಂದೆ.

"ಮೂರನೆಯದು" ಎಂದು ಉತ್ತರ ಬಂತು.

ಹೌದು. ಎರಡಾದ ಮೇಲೆ ಬರುವುದು ಮೂರೆಂಬುದು ನಿಜ. ಹಾಗಂತ ಪ್ರಮಾಣಮಾಡಿ ಹೇಳಬಹುದು. ಎಲ ಎಲಾ ಬಲು ರುಸ್ತುಮತನ ತೋರಿಸುತ್ತಾರಲ್ಲ ಎಂದುಕೊಂಡು ಆದರೂ ಧೈರ್ಯ ಕೆಡದೆ "ಹೌದು ಹೌದು ಆ ಮೂರನೆಯ ಸಮಸ್ಯೆಯ ಕುರಿತಾಗಿಯೇ ಚರ್ಚಿಸೋಣ" ಎಂದೆ.

ಆಗ ಅವರು ಮುಂದುವರಿದಿದ್ದು ಹೇಗೆ ಗೊತ್ತೆ? "ಮೊದಲನೆಯ ಸಮಸ್ಯೆ 1947ರಲ್ಲಿ ಬಗೆಹರಿಯಿತು."

ನಾನೂ ಬಿಟ್ಟುಕೊಡಲಿಲ್ಲ. ಹಲ್ಲು ಕಿರಿದು "ಹೌದು ಹೌದು ಶಿಕ್ಷಕರ ಮೊದಲನೆ ಸಮಸ್ಯೆ ಬಗೆಹರಿದಿದ್ದು 1947ರಲ್ಲಿ ದೇಶ ಸ್ವತಂತ್ರವಾದಾಗ...."

"ಎರಡನೇದು 1954ರಲ್ಲಿ."

"ಆಹಾ! ಹಾಗೇನು? ಏಳು ವರ್ಷಗಳ ಅನಂತರ." ಬಾಯಲ್ಲಿ ಹೀಗಂದರೂ ನಾನು ಕೊಂಚ ಕಕ್ಕಾಬಿಕ್ಕಿಯಾದೆ. 1954ರಲ್ಲಿ ಶಿಕ್ಷಣ ಪ್ರಪಂಚದಲ್ಲಿ ಏನು ಮಹಾ ಘಟನೆ ನಡೆಯಿತಪ್ಪ ಎಂದು ತಲೆ ತುರುಸಿಕೊಂಡೆ.

ಅಷ್ಟರಲ್ಲಿ ಅವರು ಮುಂದುವರೆದು "ಮೂರನೆ ಸಮಸ್ಯೆ ಈ ವರ್ಷ ಬಗೆಹರಿಯ ಬೇಕಾಗಿದೆ" ಎಂದರು. ನನ್ನ ತಾಳ್ಮೆ ಆವಿಯಾಗತೊಡಗಿತು. ಈತ ಹುಚ್ಚಿಗೆ ಮದ್ದುಕೊಡುವುದು ಸುಳ್ಳಲ್ಲ ಎನಿಸಿತು. ತಾನೇ ಹುಚ್ಚು ಹಿಡಿಸಿ ಆಮೇಲೆ ಮದ್ದು ಕೊಡುವ ಆಸಾಮಿಯೆಂದೂ ಭಾಸವಾಗತೊಡಗಿತು. ಆದರೂ ಬಿಡದೆ "ಹೌದೇನು.... ಈ ವರ್ಷ ಬಗೆಹರಿಯಬೇಕಾದ ಸಮಸ್ಯೆ ಅಂತೀರ ?"

"ಏಕೆಂದರೆ, ಈ ಸಮಸ್ಯೆಗೆ ಆಗಲೇ ಇಪ್ಪತ್ತು ವರ್ಷ."

"ಓಹೋ ಇಪ್ಪತ್ತು ವರ್ಷಗಳ ಹಿಂದೆ ಕಾಣಿಸಿಕೊಂಡ ಸಮಸ್ಯೆಯೇ ಮೂರ ನೇದು ? ಅಂದಮೇಲೆ ಬೇಗನೆ ಬಗೆಹರಿಯಬೇಕಾದ್ದೆನ್ನಿ" (ಮನಸ್ಸಿನಲ್ಲಿ– ಈ ಭೇಟಿಯ ಮುಂಡಮೋಚಿತು).

"ಅದೇ ನನ್ನ ಯೋಚನೆ"

"ನನಗೂ ಯೋ—ಚ—ನೆ" ಎಂದೆ ಮಂಕಾಗಿ. ಹುಚ್ಚು ಹಿಡಿಸೋದಕ್ಕೇ ಪ್ರಾಣೇಶ ನನ್ನನ್ನು ಇಲ್ಲಿಗೆ ಕಳುಹಿಸಿದ್ದು ಎಂದುಕೊಂಡೆ. ಮುಂದೆ ನನ್ನಿಂದ ಮಾತು ಹೊರಡಲಿಲ್ಲ.

"ಇನ್ನುಳಿದ ಸಮಸ್ಯೆಗಳು ಬಗೆಹರಿಯಲು ನಿಮ್ಮಂಥ ಯುವಕರು ಸಹಕರಿಸ ಬೇಕು."

"ಸಿದ್ಧವಾಗೇ ಇದ್ದೇವಲ್ಲ ಏನೋ ಯಥಾನುಶಕ್ತಿ....

"ಮೂರನೆಯ ಸಮಸ್ಯೆಯನ್ನು ತಾವೇ ಬಗೆಹರಿಸುವುದಾದರೆ ತುಂಬ ಸಂತೋಷ"

"ನಾನೆ! ನನ್ನಂಥ ಬಡಪಾಯಿ ಒಬ್ಬನೇ ಶಿಕ್ಷಣ ಪ್ರಪಂಚದ ಒಂದು ಸಮಸ್ಯೆ ಯನ್ನು ಬಗೆಹರಿಸುವುದು ಎಲ್ಲಿ ಬಂತು ಸ್ವಾಮಿ! ಆದರೂ ಕೈಲಾದ್ದನ್ನು ಮಾಡೋಣ ಅಂತಲೇ ತಮ್ಮ ಅಭಿಪ್ರಾಯ ತಿಳಿದು ಪ್ರಕಟಿಸಲು ಈ ಭೇಟಿ."

"ತುಂಬ ಸಂತೋಷ! ಕೈಲಾದ್ದನ್ನು ಮಾಡುತ್ತೀರೆಂದಿರೆಲ್ಲ ಅಷ್ಟೆ ಸಾಕು."

ನನಗೂ ಸಾಕೆನ್ನಿಸಿತು. ಒಳಗೊಳಗೆ "ಸಮಸ್ಯೆ ಸಮಸ್ಯೆ ಸಮಸ್ಯೆ—Be damned" ಎಂದುಕೊಂಡೆ.

ಅಷ್ಟರಲ್ಲಿ ಆಚೆ ಕೋಣೆಯಲ್ಲಿದ್ದವರೆಲ್ಲ ಒಳಗೆ ಬಂದರು. ಅವರ ನಡುವೆ ಗೋಪಣ್ಣ ಪ್ರಾಣೇಶರು ಇದ್ದಿದ್ದನ್ನು ಕಂಡು ಆಶ್ಚರ್ಯವಾಯಿತು. ಅಂತೂ ಸದ್ಯ ಭೇಟಿ ಮುಗಿಯಿತಲ್ಲ ಎಂಬ ಸಮಾಧಾನವುಂಟಾಯಿತು.

ಮೇಷ್ಟರು ತಮ್ಮ ಬಂಧುಗಳೊಬ್ಬಿಬ್ಬರನ್ನು ಪರಿಚಯಮಾಡಿಕೊಟ್ಟರು.... ಪ್ರಾಣೇಶ ಗೋಪಣ್ಣ ನನ್ನ ಅಕ್ಕಪಕ್ಕದ ಆಸನಗಳಲ್ಲಿ ಕುಳಿತುಕೊಂಡರು.

"ಲೋ ನನ್ನ ಕಳಿಸಿ ನೀನು ಯಾಕೋ ಬಂದೆ. ಇದೆಲ್ಲಾ ಏನು ಸಮಾಚಾರ?" ಎಂದು ಪ್ರಾಣೇಶನ ಕಿವಿಯಲ್ಲಿ ಊದಿದೆ. ಆತ ತುಟಿಯ ಮೇಲೆ ಬೆರಳೇರಿಸಿ ಗಪ್‌ಚಿಪ್ ಮಾಡಿದ.

ಅಷ್ಟರಲ್ಲಿ ಒಬ್ಬ ಹುಡುಗ ಮತ್ತು ಹುಡುಗಿಯೊಬ್ಬಳು ಉಪಹಾರ ತಂದು ಎಲ್ಲರ ಮುಂದೆ ಇಡುತ್ತಿದ್ದರು. ಎಲ್ಲರ ಮುಖದಲ್ಲಿಯೂ ಏನೋ ಒಂದು ನಗು ಮಿಂಚುತ್ತಿತ್ತು. ಕೊಂಚ ಬೆಪ್ಪಾಗಿದ್ದವನು ನಾನೇ.

ನನ್ನ ಮುಂದೆ ತಿಂಡಿಯ ತಟ್ಟೆ ಬಂದಾಗ, "ಲೋ ಇಂಟರ್‌ವ್ಯೂ ಎಲ್ಲಿಯ ತನಕ ಬಂತು?" ಎಂದು ಕೇಳಿದ ಪ್ರಾಣೇಶ. ಅನಪೇಕ್ಷಿತವಾಗಿ ತಿಂಡಿ ತಂದವರ ಕಡೆಗೆ ಹರಿದಿದ್ದ ನೋಟವನ್ನು ಮೇಷ್ಟರ ಕಡೆಗೆ ತಿರುಗಿಸಿ ನಕ್ಕು ಸುಮ್ಮನಾದೆ.

"ಈಗ ಮೂರನೆಯ ಸಮಸ್ಯೆಯ ಕುರಿತು ಮಾತುಕತೆ ನಡೆದಿತ್ತು" ಎಂದರು ಮೇಷ್ಟರು.

"ಸರಿ ಮುಂದುವರಿಯಲಿ" ಎಂದು ಪ್ರಾಣೇಶ ತಟ್ಟೆಗೆ ಕೈಯಿಕ್ಕಿದ.

"ಮೂರನೆಯ ಸಮಸ್ಯೆಯನ್ನು ಕಂಡರಲ್ಲ. ಇನ್ನು ಅವರೇ ಮುಂದುವರಿಸ ಬೇಕು" ಎಂದರು ಮೇಷ್ಟರು.

ನನಗೆ ರೇಗಿತು. "ಏನು ಮೂರನೇ ಸಮಸ್ಯೆಯನ್ನು ಕಾಣೋದು. ನೀವು ಸಮಸ್ಯೆಗಳ ಸಂಖ್ಯೆ ಹೇಳುತ್ತಾ ಕಸರತ್ತು ಮಾಡಿದಿರೇ ಹೊರತು ಸಮಸ್ಯೆ ಏನು ಎಂದು ಬಡಪೆಟ್ಟಿಗೆ ಹೇಳಲಿಲ್ಲವಲ್ಲ" ಎಂದುಬಿಟ್ಟೆ.

ಆಗ ಅಲ್ಲಿದ್ದವರೆಲ್ಲ ಯಾಕೋ ಖೊಳ್ಳೆಂದು ನಕ್ಕರು. "ಕಣ್ಣಿಲ್ಲವೇನೋ ನಿನಗೆ? ಕಂಡೆಯಲ್ಲ ಮೇಷ್ಟರ ಮೂರನೆ ಸಮಸ್ಯೆಯನ್ನ" ಎಂದು ಚುಚ್ಚಿದ ಗೋಪಣ್ಣ.

"ಅವಳೇ ಸ್ವಾಮಿ ನನ್ನ ಮೂರನೆ ಮಗಳು" ಎಂದರು ಮೇಷ್ಟರು.

ನನ್ನ ಕೈಯಿಂದ ಕೇಸರೀಭಾತು ಕೆಳಗೆ ಜಾರಿತು. ಷರ್ಟನಿಂದ ಅದನ್ನು ಝಾಡಿಸಿ ತೆಗೆಯುವಾಗ ಷರ್ಟಿನ ತೂತು ನನ್ನನ್ನು ಅಣಕಿಸಿತು. ಅದನ್ನು ಗಮನಿಸಿದ ಗೋಪಣ್ಣ "ತೂತಿರಲಿ ಬಿಡೋ" ಎಂದ. ಪ್ರತಿಯೊಂದು ನಾಯಿಗೂ ಅದರದರ ದಿನ ಇದೆ!

ಅಂತೂ ಹೇಗೋ ಕಷ್ಟಪಟ್ಟು ನಾನೂ ಅವರ ನಗುಗೊಂದಲದಲ್ಲಿ ಸೇರಿಕೊಂಡೆ. 1947 ಹಾಗೂ 1954 ರಲ್ಲಿ ಬಗೆಹರಿದ ಸಮಸ್ಯೆಗಳಾವುವೆಂದೂ ತಿಳಿಯಿತು. ಮೂರನೆಯದರ ಕುರಿತು ಮಾತುಕತೆ ನಡೆಯಿತು.

ಮನೆಗೆ ಹಿಂದಿರುಗುತ್ತಾ, ಪ್ರಾಣೇಶ "ನಿನ್ನ ಭೇಟಿಯ ವರದಿ ಕೊಡಯ್ಯ" ಎಂದ. ಹೀಗೆ ಬೇಸ್ತು ಕೊಟ್ಟನಲ್ಲ ಎಂದು ನನಗೆ ಎಲ್ಲಿಲ್ಲದ ಉರಿ. ಏನು ಹೇಳೋದೆಂದು ತಿಳಿಯಲಿಲ್ಲ. ಮೇಲೆ ಮೇಲೆ ಮೂರು ಸೀನು ಬಂದು ಮೂತಿ ಕರ್ಚೀಪಿನ ರಕ್ಷಣೆ ಪಡೆಯಿತು.

ಅಂತೂ ಮೇಷ್ಟರ ಮೂರನೆಯ ಸಮಸ್ಯೆ ಬಗೆಹರಿಯುವುದು ನಿಶ್ಚಯವಾಗಿ ಹೋಗಿತ್ತು. ಮೊದಲೇ ಮಾತುಕೊಟ್ಟಂತೆ ಆ ಸಮಸ್ಯೆ ಬಗೆಹರಿಯಲು ನಾನು ಆ ಸಮಸ್ಯೆಯನ್ನು ಕಂಡವನು ಸಹಕರಿಸಲು ಒಪ್ಪಿಯೂ ಒ-ಪ್ಪಿ-ದೆ....

ರಾಮಿ.—

---

# ಲೋರಿ

ಲಾರಿ! ಲಾರಿ! ಪೂರ ಮುರುಕು ಲಾರಿ!
ಏರಿ ಮಗ್ಗುಲಿಗೊರಗಿ ಚೀರುವ ಹಳೆಯ ಲಾರಿ!
ರಾಮು ಲಾರಿ! ಮೇಘ ಶ್ಯಾಮಲಾರಿ;
ರಹೀಮು ಹನುಮು ಪಾಂಡುರಂಗ ಸೋಮಲಾರಿ!
ಕೃಷ್ಣ ಲಾರಿ ಸರಿಹೊತ್ ಕೆಟ್ಟಲಾರಿ!
ಪುಟ್ಟ ಲಾರಿ ತುಂಬ ಕಷ್ಟಕೊಟ್ಟು ಸಂತುಷ್ಟ ಲಾರಿ!
ರಂಗ ಲಾರಿ ಮಂಗ ಶಿಂಗ ಕೋದಂಡ ಲಾರಿ
ತೂತು ಚಕ್ರ ಒಡಕು ಎಂಜಿನ್ ಹೊಲಸು ಲಾರಿ
ನಂದ ಲಾರಿ ಕೊಂಚ ಮಂದಿ ಕೊಂದ ಲಾರಿ
ಮಂದಿಗೆಲ್ಲ ಮೃತ್ಯು ತಂದ ಮಿಲ್ಟ್ರಿ ಲಾರಿ
ಲಾರಿ! ಲಾರಿ! ಪೂರ ಮುರುಕು ಲಾರಿ!
ಏರಿ ಮಗ್ಗುಲಿಗೊರಗಿ ಚೀರುವ ಹಳೆಯ ಲಾರಿ!

— ಪಾರ್ಥಸಾರಥಿ

# ಕಲ್ಲೆಣಿಸದಿರು

ಕಲ್ಲೆಣಿಸದಿರು ಕಂಡ್ಯ ಕಣಜದೊಳಗೆ
ಹಲ್ಲಿ ಲೊಟಗುಟ್ಟುವುದು ಇದಕೆ ಸಂಶಯವಿಲ್ಲ || ಪ ||

ಬೆಟ್ಟದಾ ತುದಿಯಲ್ಲಿ ಕಟ್ಟಿರುವ ಪೇಟಕ್ಕೆ
ಮೊಟ್ಟೆಯನು ಕೊರೆದು ನೀರೆರೆಯಬೇಕು
ಹುಟ್ಟಿದಾಹಣ್ಣಿನಲಿ ಬಿಟ್ಟ ಬೀಜವ ಹುರಿದು
ಕಟ್ಟೆಯಲಿ ಹೂತು ಕೈಕಟ್ಟಬೇಕು || ೧ ||

ನವಿಲಿಗೇ ಛತ್ರಿಯಲಿ ಪತ್ರ ಬರೆಕೊಡಬೇಕು
ಹವಳದಲಿ ನರುಗಂಪ ಮೂಸಬೇಕು
ಸವಿ ಮಾತ ಕುದಿಸಿ ಸಕ್ಕರೆಯ ತೆಗೆಯಲು ಬೇಕು
ಇವನ ನವನಿಂದೊದಿಸಿ 'ಗೋಲ್' ಎನ್ನಬೇಕು || ೨ ||

ಕಲ್ಲಿನೊಳಗಿರುವ ಕಪ್ಪೆಯನು ಕಕ್ಕಡಿಗಿಟ್ಟು
ಸಿಲ್ಲಿಯಲಿ ನಿಂತು ಕ್ಯಾಚ್ ಹಿಡಿಯಬೇಕು
ಬಲ್ಲಿದ ಪೆಡಂಭೂತ ಗುಡಿಯ ಪೂಜಾರಿಯಾ
ನಿಲ್ಲದಂತೇ ಕಾಲು ಮುರಿಯಬೇಕು || ೩ ||

ಹುಲ್ಲೆಣಿಸದಿರು ಕಂಡ್ಯ ಒಣವೆಯೊಳಗೆ
ಕಲ್ಲಿನಿಂದೊದೆಯುವರು ಇದಕೆ ಸಂಶಯವಿಲ್ಲಾ....

—ಅ. ರಾ. ಸೇ.

# ಶೀನಣ್ಣನ ಹಿಂದೀ ಪ್ರಚಾರ

---

ನಮ್ಮೂರಿನಲ್ಲಿ ಹಿಂದೀ ಪ್ರಚಾರ ನಡೆಯಲು ಮೂಲಕಾರಣರಾದವರ ಪರಂಪರೆ ಹೀಗಿದೆ :—

1) ಶಂಕರಣ್ಣ. 2) ಶೀನಣ್ಣ. 3) ಸೂರಪ್ಪ. ಇವರಲ್ಲಿ ಕೊನೆಯವರಿಗೆ ಹಿಂದೀ ಕಲಿಯಲು ಇಚ್ಛೆಯೇ ಇರಲಿಲ್ಲ. ಆದರೆ ಶೀನಣ್ಣ ಬಿಡಬೇಕಲ್ಲ ? ' ನಿನ್ನ ಕೈಲಿ ಸೈಕಲ್ ಕಲಿಯುವುದು ಆಗಲಿಲ್ಲ ಸೂರಪ್ಪ, ಹಿಂದೀನಾದರೂ ಕಲಿ. ಭಾರತಕ್ಕೆ ಸ್ವಾತಂತ್ರ್ಯ ಬಂದ ಮೇಲೆ ಹಿಂದಿಯೇ ರಾಷ್ಟ್ರಭಾಷೆಯಾಗುತ್ತದೆ. ಅದನ್ನು ನೀನು ಕಲಿತರೆ ಮೂರು ಇಂಕ್ರಿಮೆಂಟ್ ಸಿಕ್ಕರೂ ಸಿಗಬಹುದು ' ಎಂದು ಮುಂತಾಗಿ ಪ್ರೋತ್ಸಾಹಿಸಿದ್ದರಿಂದ ಸೂರಪ್ಪ ಒಪ್ಪಿದ. ಕಲಿಯಲಾರಂಭಿಸಿದ. ಅದು ತಿಂಗಳಿಗೆ ಏಳು ರೂಪಾಯಿ ಸಂಬಳ ಬರುವ ಕಾಲ. ಹಿಂದಿಯನ್ನು ಯಾರೂ ಕಲಿತಿರಲಿಲ್ಲ ಮುಸಲ್ಮಾನಿ ಭಾಷೆ ಇದ್ದಹಾಗಿದ್ದ ಭಾಷೆಯನ್ನು ಇವರೇಕೆ ಕಲಿಯಲಾರಂಭಿಸಿದರೋ ಯಾರಿಗೂ ತಿಳಿಯಲಿಲ್ಲ.

ಸೂರಪ್ಪ ಒಂದು ದಿನ ಊರಮುಂದಿನ ಆಲದ ಮರದ ಕೊಂಬೆಯ ಕಡೆಗೆ ಕೈತೋರಿಸಿ ' ಏ ಗಿಲಹರೀ ಹೈ ' ಎಂದ. ನಾವೆಲ್ಲ ಆ ಕಡೆ ನೋಡಿದೆವು. ಗಿಲಹರಿ ನಮಗೆ ಕಾಣಿಸಲಿಲ್ಲ. ಒಂದು ದಿನ ನಮ್ಮ ಮನೆಗೆ ಸೂರಪ್ಪ ಬಂದ. ' ಮಾಸ್ಟರ್‌ಜೀ ಆಯಿಯೇ, ಜಮೀನ್ ಪರ್ ಮತ್ ಬೈಠಿಯೇ ' ಎಂದು ಚಾಪೆಯ ಮೇಲೆ ಕುಳಿತ. ಹೀಗಾಗಿ ಸೂರಪ್ಪ ಹಿಂದೀ ಕಲಿತೇಬಿಟ್ಟ ಎಂದು ನಾವು ಬೆಕ್ಕಸಬೆರಗಾದೆವು.

ಸೂರಪ್ಪನಿಗೆ ಹಿಂದೀ ಅಕ್ಷರಗಳು ಬರಲೇ ಇಲ್ಲ. ಶೀನಣ್ಣ ಪಾಠಗಳನ್ನು ಕನ್ನಡದಲ್ಲಿ ಬರೆದು ಸೂರಪ್ಪನಿಗೆ ಕೊಡುತ್ತಿದ್ದ ದಿನಕ್ಕೊಂದು ಅಕ್ಷರ ಕಲಿತರೆ ಸಾಕು; ಪರೀಕ್ಷೆ ಹೊತ್ತಿಗೆ ಹಿಂದಿ ಬರೆಯಲು ಬರುತ್ತದೆ. ಕನ್ನಡದಲ್ಲಿ ಬರೆದ ಪಾಠ ಹೇಗಿದ್ದರೂ ಬಾಯಿಗೆ ಬಂದಿರುತ್ತದೆ ಎಂಬುದೇ ಸೂರಪ್ಪನ ಪಾಠ. ಸೂರಪ್ಪನಿಗೂ ಅಭಿಮನ್ಯುವಿಗೂ ಹತ್ತಿರದ ಹೋಲಿಕೆ ಎಂದು ನಾವು ಈ ಮೊದಲೇ ಅರಿತಿದ್ದೇವೆ.

ಸೂರಪ್ಪನಿಗೆ ವಾರಗಳ ಹೆಸರುಗಳೂ, ಹತ್ತಕ್ಕಿಂತ ಹೆಚ್ಚಿನ ಸಂಖ್ಯೆಗಳೂ ಬರಲೇ ಇಲ್ಲ. ಹೀಗಾಗಿ ಅವನು ಕೆಳಕಂಡ ರೀತಿಯಲ್ಲಿ ಮಾತನಾಡಲಾರಂಭಿಸಿದ :

**ಅಮ್ಮಾ ಬಂಕು ಚಾರ್ ರೊಟ್ಟಿ ಹೋನ.**

ರಾಮಣ್ಣ ಕಂದಾಯ ವಸೂಲ್ಮಾಡಕ್ಕೆ ಕಬ್ ಷುರುಹೋತಾಹೂಂ.

ಹಂ ಬುಧುವಾರ ರಂಗನಳ್ಳಿಕೋ ಜಾತಾಹೈ.

ನಂಗೆ ಅಲ್ಲಾ ಮುಝೆ ಹದ್ನಾಕ್ ರೂಪಾಯಿ ಬೇಕ್ತಾಹೂಂ.

ಭರಾಟೆಯಿಂದ ಪರೀಕ್ಷೆ ಬಂತು. ಮುಗಿಯಿತು. ಫಲಿತಾಂಶ ಬರುವ ದಿನ ಹತ್ತಿರಕ್ಕೆ ಬರಲಾರಂಭಿಸಿತು. ಶೀನಣ್ಣನೂ ಸೂರಪ್ಪನೂ ಆ ದಿನವನ್ನೇ ಎದುರು ನೋಡುತ್ತಿದ್ದರು. ಶೀನಣ್ಣ ಮಾಧ್ಯಮಾ ಕಟ್ಟಿದ್ದ. ಶಿಷ್ಯ ಸೂರಪ್ಪ ಪ್ರಥಮಾ ಕಟ್ಟಿದ್ದ.

ಈ ನಡುವಿನಲ್ಲಿ ಸೂರಪ್ಪನಿಗೊಂದು ಸಂಕಟ ಒದಗಿತು : ನಮ್ಮೂರಿಗೆ ಹಾಲು ಮೊಸರು ಸರಬರಾಜು ಮಾಡುವವರು ಬೇವಿನಹಳ್ಳಿಯ ಬಣಜಾರರು. ಬೇವಿನಹಳ್ಳಿ ಲಂಬಾಣಿ ಹಟ್ಟಿಗೂ ನಮ್ಮೂರಿಗೂ ನಡುವೆ ಒಂದು ಚಿಕ್ಕ ಕೆರೆಯಿದೆ. ಸೂರಪ್ಪನ ಮನೆಗೆ ಹಾಲು ಕೊಡುವ ರಂಕಿಗೆ ಈ ವಿಷಯ ಪತ್ತೆಯಾದುದರಿಂದ, ಅವಳ ಹಾಲು ಮೊಸರುಗಳಲ್ಲಿ ಗಂಗಾವತರಣವಾಯಿತು. ಅದರಿಂದ ಸೂರಪ್ಪನ ಮೊಸರವಲಕ್ಕಿ ರುಚಿ ಕೆಟ್ಟುಹೋಯ್ತು. ಅವನು ರಂಕಿಯನ್ನು ಬೈದ. 'ಯಾಡಿಯೋಯ್' ಎಂದಳು ರಂಕಿ. 'ಮೊಸರ್ನಾಗೆ ನೀರೆಲ್ಲೈತೆ ಸೋಮಿ. ಬಾಯೀಗ್ಬಂದದ್ದು ಹೇಳ್ಬೇಡ' ಎಂದಳು ಸೂರಪ್ಪ ಇನ್ನೂ ಜೋರಾಗಿ ಬೈದ. ದುಡ್ಡು ಕೊಡುವುದಿಲ್ಲ ಎಂದ. ರಂಕಿ ಮೊಸರು ಕೊಡುವುದಿಲ್ಲ ಎಂದಳು. ಸೂರಪ್ಪ ಘೋರ ಪ್ರತಿಜ್ಞೆ ಮಾಡಿದ : 'ಕೊಂಡ ಮೊಸರು ತಿನ್ನುವುದಿಲ್ಲ' ಎಂದು. ಎದ್ದು ನೇರವಾಗಿ ಲಂಬಾಣಿ ಹಟ್ಟಿಗೆ ಥಂಜಾನ ಮನೆಗೆ ಹೋದ. ಥಂಜ ಕಂಬಳಿ ಹಾಸಿದ. ಸೂರಪ್ಪ ಕುಳಿತ.

" ಅರೇ ಥಂಜಾ ಏಕ್ ಗಾವ್ ಹೋನಾ " ಎಂದ.

" ಅದೆಂಥ ಗಾವ್ ಸೋಮಿ. ಕನ್ನಡ್ದಾಲಿ ಹೇಳು " ಎಂದ ಥಂಜ. ಅವನಿಗೆ ಮುಸಲ್ಮಾನಿ ಬರದೆ ಇಲ್ಲ. ಅವನು ಹಲ್ಲಿಸಾಬಿಯ ಪರಮ ಮಿತ್ರ.

" ಅಕ್ಛರೇ ಎಕ್ ಅಕ್ಛ ಹೋನ " ಎಂದ ಸೂರಪ್ಪ.

" ನಂದೇ ಐತೆ. ತಂಗೊಂಡ್ಹೋಗು ಸೋಮಿ "

" ದಾಂ ಕ್ಯಾ. ಹಿಂದೀಮೆ ಬೋಲೋ "

" ಚಾಲೀಸ್ ಹೋತಾ "

" ಭಾಳ ಹೆಚ್ಚಾತಲೇ ಜರಾ ಕಡ್ಮಿ ಬೋಲೋ " ಎಂದ ಸೂರಪ್ಪ ಚಾಲೀಸ್ ಎಂದರೇನೋ ಅವನಿಗೆ ತಿಳಿಯದು.

" ಸತ್ತೀಸ್‌ಕು ಕಂ ನೈ " ಎಂದ ಥಂಜಾ.

" ಅಚ್ಛಾ ಅಚ್ಛಾ " ಎಂದ ಸೂರಪ್ಪ. " ಅಚ್ಛಾ " ಎಂದ ಥಂಜಾ.

" ಮಂಗಳವಾರ ಅರೇ ಪೈಸಾ ದೇತಾ" ಎಂದು ಸೂರಪ್ಪ ಮನೆಗೆ ಹಿಂತಿರುಗಿ ಬಂದ. ಅವನಿಗೆ ಖುಷಿಯೋ ಖುಷಿ—ತನ್ನ ಹಿಂದಿಗೆ ಹೆದರಿದ ಧಂಜಾ ಹದಿನೇಳೇ ರೂಪಾಯಿಗೆ ಆಕಳು ಕೊಟ್ಟನಲ್ಲಾ ಎಂದು.

ಹದಿಮೂರು ಎನ್ನುವುದಕ್ಕೆ ಹಿಂದಿಯಲ್ಲೇನು ಎಂಬುದು ಸೂರಪ್ಪನಿಗೆ ತಿಳಿಯದು. ಹದಿನೇಳಕ್ಕೆ ಹಿಂದಿ ಗೊತ್ತು- ಪರೀಕ್ಷೆಯಲ್ಲಿ ಹದಿನೇಳನ್ನು ಹಿಂದಿ ಯಲ್ಲಿ ಬರೆಯಬೇಕಾಗಿತ್ತು. ' ಏನೋ ಶೀನಾ ಹದ್ನೇಳು ಅನ್ನಕ್ಕೆ ' ಎಂದ ಸೂರಪ್ಪ. ಸೂಪರಿಂಟೆಂಡೆಂಟ್ ಗುಂಡಪ್ಪ ಅಡುಗೆ ಮನೆಯಲ್ಲಿ ಅನ್ನ ಮಾಡುತ್ತಿದ್ದ. ಗುಂಡಪ್ಪನ ಮನೆಯ ಪಡಶಾಲೆಯೇ ಎಕ್ಸಾಮಿನೇಶನ್ ಹಾಲ್. ಶೀನಣ್ಣ ಬೆರಳು ಮಡಿಸಿದ : " ಸತ್ತೀಸ್ ಕಿರಿಬೆರಳು. ಅಠಾಯೀಸ್— ಅನಾಮಿಕ, ಉನ್ನೀಸ್— ಮಧ್ಯಮ, ಬೀಸ್—ತರ್ಜನೀ. ಹದ್ನೇಳಕ್ಕೆ ಸತ್ತೀಸ್ ಅಂತ ಬರಿ ಸೂರಪ್ಪ" ಎಂದ. ಆ ಸತ್ತೀಸಿಗೆ ಧಂಜಾ ಆಕಳು ಕೊಟ್ಟಿದ್ದ.

ಮಂಗಳವಾರ ನಮ್ಮೂರಿನ ಸಂತೆ. ವ್ಯವಹಾರ ನಡೆಯುವುದೆಲ್ಲಾ ಆವೊತ್ತೇ. ಆ ಮಂಗಳವಾರ ಬಂತು. ಎದ್ದ ಸೂರಪ್ಪ ಹಾಸಿಗೆಯಿಂದ. ಹೊರಗೆ ಬಂದ. ಅಷ್ಟು ಹೊತ್ತಿಗೆ ಸರಿಯಾಗಿ ಚನ್ನ ಹಾಜರಾದ. ಸೂರಪ್ಪನಿಗೆ ಕಳೆದು ಹೋದ ಮಗು ಸಿಕ್ಕಷ್ಟು ಆನಂದವಾಯಿತು.

" ಅಲೇ ಚನ್ನಾ, ಅಯೋಗ್ಯಾ. ಎತ್ಲಗ್ಹಾಳಾಗಿ ಹೋಗಿದ್ದೆ. ಮುಜವೆಲ್ಲಾ ಮುಳ್ಪಲ್ಲಕ್ಯಾಗ್ಯದೆ" ಎಂದು " ಚೌರ ಕರ್ನಾ ಕ್ಯಾರೇ" ಎಂದು ಹಿಂದಿಯಲ್ಲಿ ಪ್ರಶ್ನಿಸಿದ ಆಗಲಿ ಎಂದ ಚನ್ನ.

ಚನ್ನನ ರೂಢನಾಮ ಚೀಳಂಗಿ ಚನ್ನ. ಅವನ ಚೌರ ಅಥಿಂಥದಲ್ಲ. 'ಧರೆಯೊಳಿಲ್ಲಿ ಇರಲಿ ನಾನು ಮರೆಯಲಾರೆ ಚನ್ನನ, ಎಂದು ಕವಿ ಹೇಳಿದುದು ಸತ್ಯ. ಅವನು ವಂಶ ಪಾರಂಪರ್ಯವಾಗಿ ಬಂದ ಕಸುಬಿನಲ್ಲಿ ಅಗ್ರಗಣ್ಯ. ಚನ್ನ ವಂಶದ ಮೂಲಪುರುಷ ರಾಮಾಯಣ ಕಾಲದಲ್ಲಿದ್ದ.

ಭಾರದ್ವಾಜಾಶ್ರಮದಿಂದ ಶ್ರೀರಾಮನು ಸೀತಾಸಮೇತನಾಗಿ ಹೊರಟನಷ್ಟೆ. ಅವನ ಮುಖವೆಲ್ಲಾ ಕರಿಕೂದಲಿನ ಪೊದೆಯಾಗಿತ್ತು. ಕೆನ್ನೆ ಕಡಿಯುತ್ತಿತ್ತು. ' ಚೌರವಾಗಿದ್ದರೆ ಚೆನ್ನಾಗಿತ್ತು ' ಎಂದುಕೊಂಡ ಶ್ರೀರಾಮ. ಅವನ ಆಶೆ ಕೂಡಲೆ ಸಫಲವಾಗುವ ಹಾಗೆ ತೋರಿತು. ಕಾನನಾಂತರದಿಂದ, ಹಣ್ಣು ಹಣ್ಣು ಮುದುಕ ನೊಬ್ಬ ಬಂದು ಶ್ರೀರಾಮನಿಗೆ ಚೌರ ಮಾಡಲಾರಂಭಿಸಿದ. ಸ್ವಲ್ಪ ಹೊತ್ತಿನೊಳ ಗಾಗಿಯೇ ರಕ್ತಸಿಕ್ತವಾಗಿ ಮುಹಂತ್ವಾಂತ್ಸ ಉರಿಯುತ್ತಿತ್ತು.

ಆದನ್ನೇ "ಗೃಧ್ರಾಧಿಪ ಸಂ ಸೇವಿತ ರಾಮ" ಎಂದು ಕವಿಗಳು ವರ್ಣಿಸಿದ್ದಾರೆ. ರಾಮ ಲಕ್ಷ್ಮಣರು ಸೀತೆಯೊಡನೆ ಪ್ರಯಾಣವನ್ನು ಮುಂದುವರಿಸಿ ಪಂಚವಟಿಗೆ

ಬಂದಾಗ ರಾಮು ಉರಿಯಿಂದ ಸೋತು ಹೋಗಿದ್ದ. ಸುಸ್ತಾಗಿದ್ದ. (Cartoon relating to Sri Rama)

'ಪಂಚವಟೀತಟ ಸುಸ್ಥಿತ ರಾಮು' ಎಂದು ಕವಿ ಅದನ್ನು ವರ್ಣಿಸಿದ್ದಾನೆ.

ಆ ಗೃಧ್ರಾಧಿಪನ ವಂಶ ಸಂಭೂತ ಜನ್ನ ನಮ್ಮೂರಿನ Busiest Barber ಅವನ ಕ್ರಾಪ್‌ಕಟ್ ವರ್ಣಿಸಲು ಉಶನಶನಿಗೂ ಸಾಧ್ಯವಿಲ್ಲ. ಅವನು ಬೋಳಿಸಿದಾಗ ಆಗುವ ಉರಿ ವಾಗಾತೀತ. ಕುಂಭೀಪಾಕದಲ್ಲೂ ಅಂಥ ಉರಿಯಾದೀತೇ ಎಂಬುದು ಸಂಶಯಾಸ್ಪದ.

ಅವನ ಕೈಯಿಂದ ಚೌರ ಮಾಡಿಸಿಕೊಂಡ ಮೇಲೆ, ಸೂರಪ್ಪನ ತಲೆ ಕಾದ ತಾಮ್ರದ ಗಿಂಡಿಯಂತೆ, ಮುತ್ತುಗದ ಹೂವಿನಂತೆ ರಂಜಿಸುತ್ತಿತ್ತು. ಕಮ್ಮಾರರ ತಿದಿಯ ಉರಿ ತನ್ನ ತಲೆಯಲ್ಲೇ ಇದ್ದಂತೆ ಭಾಸವಾಯಿತು. ಜನ್ನನ ಚೌರವಾದ ಮೇಲೆ ಬಿಸಿನೀರಿನ ಸ್ನಾನ ಮಾಡುವುದು ಅಸಾಧ್ಯ ಆದ್ದರಿಂದ, ಅವನು ಒರಲುತ್ತಾ ಕೆರೆಗೆ ಹೋಗಿ ತಣ್ಣೀರಿನಲ್ಲಿ ಮುಳುಗಿ ಒದ್ದೆ ಪಂಚೆ ತಲೆಯ ಮೇಲೆ ಸುತ್ತಿ ಮನೆಗೆ ಬಂದ. ಗಂಧದ ಚಕ್ಕೆ ತೇದು ತಲೆಗೆ ಲೇಪಿಸಿಕೊಂಡು ಅದರ ಮೇಲೆ ಮತ್ತೆ ಒದ್ದೆ ಬಟ್ಟೆ ಕಟ್ಟಿದ. ಬಳಿಕ, ಉರಿ, ಶೇ. 50 ರಷ್ಟು ಕಡಿಮೆಯಾಯ್ತು. ಮೊಸರವಲಕ್ಕಿ ತಿನ್ನಲಾರಂಭಿಸಿದ.

ಅದು ಮುಗಿಯುವಷ್ಟರಲ್ಲಿ ಧಂಜಾ ಬಂದು ದುಡ್ಡು ಕೇಳಿದ. ಸೂರಪ ಹದಿನೇಳು ರೂಪಾಯಿ ಕೊಟ್ಟ.

ಧಂಜಾ—ಇನ್ನಿಪ್ಪತ್ತು ಕೊಡೀ ಸೋಮಿ.

ಸೂರಪ್ಪ—ಇನ್ನೆಲ್ಲಿ ಇಪ್ಪತ್ತ್ರೋ ಭೋ........ನೇ.

ಧಂ—ನೀನ್ಹೇಳಿದ್ದು ಸೋಮಿ.

ಸೊ—ಕಳ್ಳ . ... ನೇ. ನಾನೇನು ಹೇಳಿದ್ದೆನೋ. ಇದೇನು ವ್ಯಾಪಾರಾನೋ ಏನು ಇಸ್ಪೇಟೋ?

ಧಂ—ಬೈಬ್ಯಾಡ ಸೋಮಿ? ಎಷ್ಟ್ಕೊಡ್ತೆಂದೆ? ಸತ್ತೀಸ್ ಅಂದೆದ್ಕೆ, ಅಚ್ಚಾ ಅಚ್ಚಾ ಅಂದೆಲ್ಲಾ ಸೋಮಿ?

ಸೂ—(ನಗುತ್ತಾ) ಹಿಂದಿ ಗೊತ್ತೈತೇನೋ ನಿನ್ಗೆ? (ರೇಗಿ) ಸತ್ತೀಸ್ ಅಂದ್ರೆ ಕ್ಯಾ.

ಧಂ—ಸತ್ತೀಸ್ ಅಂದ್ರೆ ಮುವತ್ತೇಳು ಸೋಮಿ.

ಸೂ—ಯಾರ್ಮನೆ ಗಂಟೋ ಅಯೋಗ್ಯ? ಸತ್ತೀಸ್ ಅಂದ್ರೆ ಹದ್ನೇಳು. ತಿಳಿನ ಗೊತ್ತಿಲ್ದ ಹಿಂದಿ ನಿನಗ್ಗೊತ್ತೈತೇನೋ?

ಧಂ: ಇದೆಲ್ಲಾ ಪರ್ಪಟ್ ಬಿಟ್ಬಿಡು ಸೋಮಿ. ರಾಮಣ್ಣೋರ ತಾಕೆ ಹೋಗನ. ಅಂವ್ರೆಂಗ್ಹೇಳ್ತರೋ ಅಂಗೆ ಆಗ್ಲಿ.

ಸರಿ, ರಾಮಣ್ಣನ ಹತ್ತಿರಕ್ಕೆ ಪಂಚಾಯ್ತಿ ಬಂತು ಇಬ್ಬರೂ ತಮ್ಮ ವಾದ ಮಾಡಿದರು ರಾಮಣ್ಣ ಕೇಳಿಕೊಂಡ. ಸೂರಪ್ಪ ತನ್ನ ವಾದ ಮುಗಿಸುತ್ತಾ ಹೇಳಿದ: 'ರಾಮಣ್ಣಾ, ನಂಗೊತ್ತಿಲ್ದ ಹಿಂದಿ, ಶೀನಗ್ಗೊತ್ತಿಲ್ದ ಹಿಂದಿ ಈ ಲಂಬಾಣಿಗೆ ಗೊತ್ತೇ. ನಾನು ಪ್ರಥಮಾ ಪಾಸ್ಮಾಡ್ದೆ ಅಂತ ತಿಳ್ಕೋ. ನಂಗ್ಹೇಳಕ್ಬರ್ತಾನಿವ್ನು'

ಧಂಜಾ ವಾದಿಸಿದ: ಅಲ್ರಾಮಣ್ಣೋಮಿ. ಹುಟ್ದಾಗ್ನಿಂದ ಕಾಲಾಬುಡೇನಿ, ಹಲ್ಲಿ ಜೊತೆಗೆ ಓಡ್ಯಾಡ್ತಿನಿ. ಇವ್ರು ನಂಗ್ಹೇಳ್ತಾರೆ. ಬ್ರಾಂಬ್ರು ಇಂಥಾ ಮೋಸ ಮಾಡ್ಬೌದೇನ್ಸೋಮಿ?

ಅಷ್ಟು ಹೊತ್ತಿಗೆ ಶಿವಣ್ಣ ಹಾಜರಾದ.

"ಸೂರಪ್ಪ ರಿಸಲ್ಟು ಬಂತು" ಎಂದ

ಸೂರಪ್ಪ—ಬಂದ್ಯಾ. ಲೇ ಶೀನ ಈ ಧಂಜಾನ್ಮಾತು ಕೇಳೋ. ಸತ್ತೀಸ್ ಅಂದ್ರೆ ಮುವತ್ತೇಳಂತೆ ನೀನಾರು ಹೇಳಲೇ ಸ್ವಲ್ಪ.

ಶೀನಣ್ಣ ಕಿರಬೆರಳು ಮಡಿಸಿ ಎಣಿಸಲಾರಂಭಿಸಿದ: ಸೊಲಹ್-ಕನಿಷ್ಠಕಾಭ್ಯಾಂ ನಮಃ, ಸತ್ರಹ್-ಅನಾಮಿಕಾಭ್ಯಾಂ ನಮಃ, ಅಠಾರಹ್-ಮಧ್ಯಮಾಭ್ಯಾಂ ನಮಃ ಉನ್ನೀಸ್-ತರ್ಜನೀಭ್ಯೋನ್ನಮಃ, ಬೀಸ್-ಅಂಗುಷ್ಠಾಭ್ಯಾಂ ನಮಃ. ಸೂರಪ್ಪ ಸತ್ರಹ್ ಅಂದ್ರೆ ಹದ್ನೇಳು ಸತ್ತೀಸ್ ಅಂದ್ರೆ ಮೂವತ್ತೇಳು.

ಧಂಜಾ ಶಿವಣ್ಣನ ಕಾಲು ಹಿಡಿದುಕೊಂಡ.

"ಹಂಗ್ಹೇಳ್ನನ್ಗುರುವೇ" ಎಂದ. ಧಂಜಾ ಕಾಲು ಬಿಟ್ಟ ಕೂಡಲೇ ಸೂರಪ್ಪ ಶೀನಣ್ಣನ ಕುತ್ತಿಗೆ ಹಿಡಿದು ಬಗ್ಗಿಸಿ ಬೆನ್ನಿನ ಮೇಲೆ ಹೇರಲಾರಂಭಿಸಿದ.

ರಾಮಂಣ ಸೂರಪ್ಪನನ್ನು ತಡೆದು "ಇದೇನ್ಸೂರಪ್ಪ? ಕೈ ಬಿಡು ಧಂಜಾಗೆ ಇಪ್ಪತ್ರುಪಾಯ್ಕೊಡ್ಹೋಗು" ಎಂದ

ಸೂರಪ್ಪನ ಕಣ್ಣು ಕೆಂಪಾಗಿದ್ದವು ಕೋಪದಿಂದ ಅವನು ಮೈಮರೆತಿದ್ದ "ತಡೀಬ್ಯಾಡ ರಾಮಂಣ. ಈ ಶೀನನ ತೌಡ್ಹರಿದು ಕೈಗ್ಕೊಡ್ತೀನಿ. ಚರ್ಮ ಸುಲ್ದು ಕೆರ ಹೊಲಿಸ್ಕೊಂತಿನಿ. ಆಗ ನೋಡಿದ್ರೆ ಸೈಕಲ್ಲು. ಈಗ ಹಿಂದಿ. ಶನಿ ಸೂ ... .. ಗ"

ರಾಮಣ್ಣ ಸೂರಪ್ಪನನ್ನು ಬಲವಂತದಿಂದ ಕೂಡಿಸಿದ.

"ಅದಿರ್ಲಿ ಸೂರಪ್ಪ ನೀನು ಬ್ರಾಹ್ಮಣನೋ ಶೂದ್ರನೋ. ಇವತ್ತು ಮಂಗಳ ವಾರ, ಅಮಾವಾಸ್ಯೆ. ಚೌರ ಮಾಡಿಸಿಕೊಂಡಿದೀಯಲ್ಲ?" ಎಂದು ಕೇಳಿದ

ಸೂರಪ್ಪ ಘುಡುಘುಡಿಸಿದ. "ಆ ಚನ್ನಂದೇ ಇದೆಲ್ಲ. ಬೆಳಕ್ಹರಿಯುಷ್ಟತ್ಗೆ ಮನೆ ಮುಂದೆ ಬಂದು ಚೌರ ಮಾಡ್ದ. ಸಿಗ್ಲಿ ಅವ್ನು ಇನ್ನೀ ಊರ್ಗೆ ಬರ್ದಂಗೆ ಒದ್ದು ಕಳಿಸ್ತೀನಿ.

ಶೀನಣ್ಣ ನಕ್ಕು ಹೇಳಿದ : ಯಾಕ್ರೇಗ್ರಿಯಲೇ ಸೂರಪ್ಪಾ ? ಸುಂಸುಂನೆ. ನಿನ್ನದೃಷ್ಟನಕ್ಕೆ ಇನ್ನೊಬ್ರ ಮೇಲೆ ರೇಗಿ ಏನ್ಬಂತೋ ? ರಿಸಲ್ಟ್ ಬಂತು ನೀನು ಫೇಲು

ಸೂರಪ್ಪ—ನೆಗ್ದ್ ಬಿದ್ಹೋಗ್ಲಿ ಯಾವನಿಗ್ಬೇಕು ನಿನ್ಹಿಂದಿ ? ನಿಂದೇನಾತು ?

ಶೀನಣ್ಣ—ನಂದೂ ಫೇಲು.

ಆವೆರಡು ಮಾತುಗಳೇ ಶೀನಣ್ಣನ ಹಿಂದೀ ಪ್ರಚಾರ ಮತ್ತು ಅಭ್ಯಾಸಗಳಿಗೆ ಚರಮ ಗೀತೆಯಾದವು.

—ಅ. ರಾ. ಸೇ.



ಮಾಸ್ತರು : ಏನೋ ತಲೆಹರಟೆ ನಿಂದು, ನಾಳೆಯಿಂದ ಸ್ಕೂಲಿಗೆ ಸೇರಿಸುಲ್ಲ ನಿನ್ನ.

ಹುಡುಗ : ಮಹಾ ! ನಾನು ಬಂದರೆ ತಾನೆ ಶಾಲೆಗೆ ಸೇರ್ಸೋದು—ಇವತ್ತಿಂದಲೇ ನಾ ಮುಂದೆ ಮುಂಥ್ರ ಆಗ್ತೇನೆ !

# ನನ್ನ ಯೋಚನೆ

ಒಂದು ಯೋಜನೆ ! ಎರಡು ಯೋಜನೆ !
ಮುಗಿವ ಮೊದಲೇ ಯೋಜನೆ !
ಹೊಟ್ಟೆ ಯೋಜನೆ, ಬಟ್ಟೆ ಯೋಜನೆ !
ಕ್ಷೀರ ಯೋಜನೆ, ನೀರ ಯೋಜನೆ !
ತಿರುವು ತಿರುವರು ಪೇಜನೆ !
ನನ್ನ ಮದುವೆಯ ಯೋಜನೆ—
ಯಾರಿಗದರ ಯೋಚನೆ ?
ಬೆಳೆಯುತ್ತಿರುವ ನನ್ನೋಜನೆ
ನೆನೆದು ಬಾಳ ಸಾಲ್ವೇಜನೆ
ಮಾಡಿ, ಒಂದು ಮ್ಯಾರೇಜನೆ
ನನಗೆ ಮಾಡುವ ಯೋಜನೆ—
ಯಾರಿಗಿದರ ಯೋಚನೆ ?
ಇಲ್ಲವೆ, ವಿವೇಚನೆ ?
ನಾನೇನಂಥ ಹೀಚನೆ ?
ಕೃಮಿ ? ಕೀಟ ? ಲೀಚನೆ ?
ಮೃಗವೇ ? ಮಾರೀಚನೆ ?
ಏಕವಚನ ಟೀಚನೆ ?
ಕೊಂಚ ಇತ್ತ ಯೋಚನೆ,
ಬೇಡವೆ ? ಆಲೋಚನೆ ?
ನೋಡುತಾ ಈ ಪೇಚನೆ
ಕುಗ್ಗಿದಾ ಕರೇಜನೇ
ದುಃಖತಪ್ತ ಸ್ಟೇಜನೆ
ಬಾಷ್ಪಾಂಬುಧಿ ವಾಯೇಜನೆ !
ಮಾಡಿ ಬೇಗ, ಯೋಜನೆ
ನಡೆಯಿಸಿ ಮ್ಯಾರೇಜನೇ
ಒಂದು ಮೀನ ಲೋಚನೆ
ಸಾಕು, ಅದೇ ಯೋಚನೆ !
ಅದಕೆ ಏನು ಅಡಚಣೆ
ನಡೆಸಿ ಬೇಗ ಮ್ಯಾಚನೆ !
ಅವಳ ಚಿತ್ರ ಮನದಿ ರಚನೆ
ಅವಳಿಗಾಗಿ ಹೃದಯ ಪಚನೆ !

ಅವಳ ಧ್ಯಾನ, ಸದಾ ಭಜನೆ
ಸಹಸ್ರ ನಾಮದರ್ಚನೆ
ನಿಮಗೆ ಭಾರಿ ಯೋಜನೆ
ನನಗೆ ಭಾರ್ಯೆ! ಯಾಚನೆ!
ಜೊತೆಗೆ ಮಾವನ ದೋಚನೆ
ತರಿಸಬೇಕು ಕೋಚನೆ!
ತ್ಯಾಗ? ಕಾಗದ ಗೀಚನೆ
ವೇದಿಕೆಯ ಪ್ರೀಚನೆ
ನುಡಿವುದಾಗಸದಾಚನೆ
ನಡೆವುದೇಚ್ for ಈಚನೆ!
ಇಲ್ಲ ಮೀನ ಲೋಚನೆ
ಸಾಕು, ದೀನ ಲೋಚನೆ
ಇಲ್ಲ ದೀನ ಲೋಚನೆ
ಸಾಕು ಹೀನ ಲೋಚನೆ
ತೊಡಿಸಿ ಕರಿ ಸುಲೋಚನೆ
ಮಡದಿ ನನ್ನ ಯಾಚನೆ
ಲಾಡು ಫೇಣಿ ಭೋಜನೆ
ಪೆನ್ನು, ಚಿನ್ನ ವಾಚನೆ
ಬಾಜ ಬಜಂತ್ರಿ ಬಾಜನೆ
ಭೂಮಾ ಹೋಮ ಲಾಜನೆ
ಬೇಡ! ನಾನು ಭೋಜನೆ?
ಕೂಡದಂಥ ಗರ್ಜನೆ!
ಕನ್ಯೆಯೊಬ್ಬಳಾರ್ಜನೆ
ಬ್ರಹ್ಮಚರ್ಯ ವಿಸರ್ಜನೆ
ತಾಳಿಕಂಠ ಕಟಾಚಣೆ
ಅಲ್ಲಿಗೇ, ವಿಮೋಚನೆ!
ನಿಲ್ಸಿ ಇತರ ಸ್ಪೀಚನೆ
ಮಾಡಿ, ಬೇಗ ಯೋಜನೆ
ಕೇಳಿ, ನಾನು ಯೋಜನೆ
ಬರಿಯ ಖರ್ಚು ವೆಚ್ಚನೆ
ನನ್ನ ನಿತ್ಯ ಯಾತನೆ
ಅನುದಿನದ ಪ್ರಾರ್ಥನೆ
ಯಾರಿಗಿದರ ಯೋಚನೆ,
ನನ್ನ ಮದುವೆಯ ಯೋಜನೆ?

ಎಸ್. ರುದ್ರಪ್ಪ.




Negative Rights Controlled by
VIJAYA PICTURES CIRCUIT, MADRAS-26.

*Distributors for Mysore, South Kanara & Coorg:*

**VIJAYA TALKIE DISTRIBUTORS, BANGALORE-9**

For Bombay, Karnataka: SHRINIVAS PICTURES, GADAG.

For Hyderabad :—JAGAT PICTURES, SECUNDERABAD.

## Statement of ownership of Koravanji (Kannada)

| | | | |
|---|---|---|---|
| 1. | *Place of Publication* | : | KORAVANJI<br>Balepet,<br>Bangalore-9. |
| 2. | *Periodicity of Publication* | : | MONTHLY<br>1st of Every Month |
| 3. | *Printer's Name* | : | Sri B. SREENIVASA IYENGAR, |
| | *Address* | : | 6, Cottonpet,<br>Bangalore-2. |
| | *Nationality* | : | INDIAN |
| 4. | *Publisher's Name* | : | Sri B. N GUPTHA, |
| | *Nationality* | : | INDIAN |
| | *Address* | : | KORAVANJI,<br>Balepet,<br>Bangalore-9. |
| 5. | *Editor's Name* | | Dr. M SIVARAM |
| | *Nationality* | | INDIAN |
| | *Address* | : | Balepet,<br>Bangalore-9. |
| 6. | *Name and address of Individuals who own the Paper* | : | M. SIVARAM<br>Sole Proprietor. |

I, M. SIVARAM, hereby declare that the particulars given above are true to the best of my knowledge and belief.

M. SIVARAM

1st March 58 *For* **Sri B. N. GUPTHA,**

Koravanji, March 1958

ಮಾರ್ಚಿ ತಿಂಗಳಲ್ಲಿ ಬಿಡುಗಡೆ

ಎಸ್. ಎಸ್. ಎಸ್. ನಾಟಕ ಮಂಡಲಿಯವರ ಮಹೋನ್ನತ

ಪೌರಾಣಿಕ ಕಥಾ ಚಿತ್ರ

# ಭಕ್ತ ಪ್ರಹ್ಲಾದ

—[ ಕನ್ನಡ ]—



ಎಂ. ವಿ ಸುಬ್ಬಯ್ಯನಾಯ್ಡು – ಲಕ್ಷ್ಮೀಬಾಯಿ – ಮಾಸ್ಟರ್ ಲೋಕನಾಥ್

ಅಶ್ವತ್ – ನರಸಿಂಹರಾಜು – ಬಾಲಕೃಷ್ಣ ಮುಂತಾದವರು.

ನಿರ್ದೇಶಕರು:– ಎಂ. ವಿ. ಸುಬ್ಬಯ್ಯನಾಯ್ಡು, ಎಚ್. ಎಸ್ ಕೃಷ್ಣಸ್ವಾಮಿ

SRI RAGHAVENDRA RELEASE

REG NO. M. 4718 KORAVANJI. MARCH 1958



Printed by B. S. Iyengar, Bangalore City.
Publisher—B. N. Gupta. Editor—M. Sivaram.